# ಕೆಂಗೇರಿಯಲ್ಲಿ ಕನ್ನಡ ರಾಜ್ಯೋತ್ಸವ



**ಬೆಂಗಳೂರು:** ಕೆಂಗೇರಿಯ ಕಲ್ಪತರು ಸಾಂಸ್ಕೃತಿಕ, ಸಾಮಾಜಿಕ ಮತ್ತು ಕ್ರೀಡಾ ಟ್ರಸ್ಟ್ ಮತ್ತು ಶೇಷಾದ್ರಿಪುರಂ ಅಕಾಡೆಮಿ ಆಫ್ ಬಿಸಿನೆಸ್ ಸ್ಟಡೀಸ್‌ನಿಂದ 63ನೇ ಕನ್ನಡ ರಾಜ್ಯೋತ್ಸವ ಆಚರಿಸಲಾಯಿತು.

ಸಮಾರಂಭದಲ್ಲಿ ಮಾತನಾಡಿದ ವಿದ್ಯಾವಾಚಸ್ಪತಿ ಡಾ.ಅರಳು ಮಲ್ಲಿಗೆ ಪಾರ್ಥಸಾರಥಿ, ಕನ್ನಡಿಗರು ಸಂಸ್ಕಾರವಂತರಾಗಿರುವುದರಿಂದ ಅವರ ಜೀವನ ಶೈಲಿಯಲ್ಲಿ ಒಂದೇ ತೆರನಾಗಿದೆ ಎಂದರು.

ಶಾಸಕ ಎಸ್.ಟಿ.ಸೋಮಶೇಖರ್ ಮಾತನಾಡಿ, ಡಾ. ಗೀತಾರಾಮಾನುಜಂ ಅವರಿಗೆ ತಡವಾಗಿಯಾದರು ರಾಜ್ಯ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ ಅವರು ಎಂದು ನನಗೆ ಪ್ರಶಸ್ತಿಯನ್ನು ನೀಡಿ ಎಂದು ಕೇಳಿಕೊಂಡವರಲ್ಲ, ಅದು ತಾನಾಗಿಯೆ ಅವರನ್ನು ಹುಡಕಿಕೊಂಡು ಬಂದಿದೆ ಎಂದರು

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ.ಪಿ.ಕೃಷ್ಣ, ಕೆಂಗೇರಿ ವಾರ್ಡ್ ಬಿಬಿಎಂಪಿ ಸದಸ್ಯ ಕಲ್ಪತರು ಸಾಂಸ್ಕೃತಿಕ, ಸಾಮಜಿಕ ಟ್ರಸ್ಟ್‌ನಿಂದ ರಾಜ್ಯೋತ್ಸವ ಪ್ರಶಸ್ತಿಪುರಸ್ಕೃತರಾದ ಡಾ. ಗೀತಾ ರಾಮಾನುಜಂ ಅವರನ್ನು ಅಭಿನಂದಿಸಲಾಯಿತು. ವಿ.ವಿ.ಸತ್ಯನಾರಾಯಣ ಮತ್ತು ವಿಶ್ವವೆಂಕಟೇಶ್ವರ ಇಂಟರ್‌ನ್ಯಾಷನಲ್ ಶಾಲೆಯ ಸಂಸ್ಥಾಪಕ ಅಧ್ಯಕ್ಷ ಕಟ್ಟಾ ಬಾಲಾಜಿ ನಾಯ್ಡು, ನಿಮ್ಸ್ ಪ್ರಾಂಶುಪಾಲರಾದ ಡಾ. ಸುಕನ್ಯಾ ಹೆಗಡೆ, ಶೇಷಾದ್ರಿಪುರಂ ಕಾಲೇಜು ಪ್ರಾಂಶುಪಾಲ ಪ್ರೊ. ಜಯರಾಮ್ ಮತ್ತಿತರರು ಪಾಲ್ಗೊಂಡಿದ್ದರು. 2018ರ ರಾಜ್ಯೋತ್ಸವದ ಪ್ರಶಸ್ತಿಪುರಸ್ಕೃತರಾದ ಡಾ. ಗೀತಾ ರಾಮಾನುಜಂ ಅವರನ್ನು ಅಭಿನಂದಿಸಲಾಯಿತು.

ಪ್ರಜಾವಾಣಿ ಶುಕ್ರವಾರ • ಡಿಸೆಂಬರ್ 28, 2018

### ಯುವಜನತೆಗಾಗಿ ಕುವೆಂಪು : ಓದು ಅಭಿಯಾನಕ್ಕೆ ನಗರದಲ್ಲಿ ಚಾಲನೆ

# 'ಕುವೆಂಪು ಸಾಹಿತ್ಯದಲ್ಲಿ ಸಮಸ್ಯೆಗೆ ಪರಿಹಾರ'

ಪ್ರಜಾವಾಣಿ ವಾರ್ತೆ

ಬೆಂಗಳೂರು: ಕುವೆಂಪು ಅವರ ಸಾಹಿತ್ಯದ ಓದು ಮತ್ತು ವಿಚಾರಧಾರೆಯನ್ನು ತಿಳಿಯುವ 'ಯುವಜನತೆಗಾಗಿ ಕುವೆಂಪು' ಅಭಿಯಾನಕ್ಕೆ ನಗರದ ಶೇಷಾದ್ರಿಪುರ ಪಿ.ಯು. ಕಾಲೇಜಿನಲ್ಲಿ ಗುರುವಾರ ಚಾಲನೆ ನೀಡಲಾಯಿತು.

'ಸಮಾಜದಲ್ಲಿನ ಪ್ರತಿಯೊಂದು ಸಮಸ್ಯೆಗೂ ಕುವೆಂಪು ಅವರ ಸಾಹಿತ್ಯದಲ್ಲಿ ಪರಿಹಾರವಿದೆ' ಎಂದು ಹಿರಿಯ ವಕೀಲ ಪ್ರೊ.ರವಿವರ್ಮ ಕುಮಾರ್ ಅವರು ಅಭಿಯಾನದ ಉದ್ಘಾಟನಾ ಕಾರ್ಯಕ್ರಮದಲ್ಲಿ ಅಭಿಪ್ರಾಯಪಟ್ಟರು.

'ಇಂದಿನ ಕಾಲೇಜುಗಳಲ್ಲಿ ಪಠ್ಯ ಶಿಕ್ಷಣವನ್ನು ನೀಡುತ್ತಿದ್ದಾರೆಯೇ ಹೊರತು, ನೀತಿ ಕಲಿಸುತ್ತಿಲ್ಲ. ಹಾಗಾಗಿ ವಿದ್ಯಾರ್ಥಿಗಳು ವಿಚಾರ, ನಂದಿಕೆ, ಶಿಕ್ಷಣಾರ್ಹತೆ, ಪ್ರತಿಭೆಗೆ ಅನುಗುಣವಾದ ಉದ್ಯೋಗಗಳನ್ನು ಹೊಂದಲು ಸೂಕ್ತ ಮಾರ್ಗದರ್ಶನ ಸಿಗುತ್ತಿಲ್ಲ. ಪೋಷಕರ ವ್ಯಕ್ತಿಗಳನ್ನೇ ಮಕ್ಕಳು ಅನುಸರಿಸುತ್ತಿದ್ದಾರೆ' ಎಂದು ಅವರು ಹೇಳಿದರು.

'ನಾನು ಸಂಸ್ಕೃತದ ವಿದ್ಯಾರ್ಥಿ. ನನ್ನ 21ನೇ ವಯಸ್ಸಿನವರೆಗೂ ಕನ್ನಡ ಪುಸ್ತಕಗಳನ್ನು ಓದಿರಲಿಲ್ಲ. ಮೇಷ್ಟ್ರಾಗಿದ್ದ ತಂದೆಯವರು 22ನೇ ವರ್ಷಕ್ಕೆ ಕಾಲಿರಿಸಿದ ದಿನ, ಕುವೆಂಪು ಅವರ 'ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ' ಎಂಬ ಪುಸ್ತಕ ತಂದುಕೊಟ್ಟರು. ಅದು ಎಷ್ಟು ವಿಚಾರಪೂರಿತವಾಗಿದೆಯೆಂದರೆ, ಓದಲು ಆರಂಭಿಸಿದಾಗ ಕೆಳಗಿಡಲು ಮನಸ್ಸಾಗಲೇ ಇಲ್ಲ. ಬೆಳಗಿನ ಜಾವ 3.30ರವರೆಗೂ ಓದಿ ಮುಗಿಸಿದೆ' ಎನ್ನುತ್ತಾ ತಮ್ಮೊಂದಿಗೆ ತಂದಿದ್ದ ಆ ಹಳೆಯ ಪುಸ್ತಕವನ್ನು ವಿದ್ಯಾರ್ಥಿಗಳಿಗೆ ತೋರಿಸಿದರು.

'ಆ ಸಣ್ಣ ಪುಸ್ತಕದ ಪ್ರಭಾವದಿಂದಲೇ ನಾನು ಪ್ರೀತಿಸಿ, ಅಂತರ್ಜಾತಿಯ ವಿವಾಹವಾದೆ. ಪತ್ನಿ ಮರಾಠಿ ಭಾಷೆಯವರು ಎಂಬ ಭಾಷಾಭೇದ ತೋರಲಿಲ್ಲ. ಕಂದಾಚಾರ ಧಿಕ್ಕರಿಸಲೆಂದೇ ಅಮಾವಾಸ್ಯೆಯ ರಾಹುಕಾಲದಂದೇ ಮದುವೆಯಾದೆ. ಕೇವಲ ಐದು ರೂಪಾಯಿಯ ಎರಡು ಹೂವಿನ ಹಾರಗಳಿಂದ ಸಂಗಾತಿಯೊಂದಿಗೆ ದಾಂಪತ್ಯಕ್ಕೆ ಕಾಲಿರಿಸಿದೆ' ಎಂದು ಮಂತ್ರ ಮಾಂಗಲ್ಯದ ಮದುವೆ ನೆನಪಿಸಿಕೊಂಡರು. ತಮ್ಮ ಮಗಳು ಬೆಳ್ಳಿ, ಮುಸ್ಲಿಂ ಯುವಕನನ್ನು ಮದುವೆಯಾಗಿರುವ ಕುರಿತು ಹೆಮ್ಮೆಯಿಂದ ಹೇಳಿಕೊಂಡರು.

'ನಾವಿಂದು ಹಣದಾಸೆ, ಜಾತಿ, ಧರ್ಮದ ವ್ಯಾಮೋಹ ಹಾಗೂ ಭಾಷಾಂಧತೆಗೆ ಬಲಿಯಾಗಿ ಅನರ್ಹರನ್ನು ಜನಪ್ರತಿನಿಧಿಗಳಾಗಿ ಆಯ್ಕೆ ಮಾಡುತ್ತಿದ್ದೇವೆ. ಸಮಾಜದಲ್ಲಿ ಧರ್ಮ, ಗೋರಕ್ಷಣೆ ಹೆಸರಲ್ಲಿ ಹಿಂಸಾಚಾರ ಮತ್ತು ಮರ್ಯಾದೆಗೇಡು ಹತ್ಯೆಗಳು ನಡೆಯುತ್ತಿವೆ. ಇದು ಪ್ರಜಾಪ್ರಭುತ್ವಕ್ಕೆ ಮಾರಕ. ನೀವು ಕುವೆಂಪು ಅವರ ವಿಚಾರಗಳನ್ನು ಮೈಗೂಡಿಸಿಕೊಳ್ಳಲು ಆರಂಭಿಸಿ. ನಿಮ್ಮ ಉತ್ತಮ ಆಲೋಚನೆಗಳಿಂದ ಸ್ವಾಸ್ಥ್ಯ ಸಮಾಜ ನಿರ್ಮಾಣ ಆಗುತ್ತದೆ' ಎಂದು ಕಿವಿಮಾತು ಹೇಳಿದರು.

ಪದವಿಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕ ಅಶೋಕ್ ಕುಮಾರ್, 'ಕುವೆಂಪು ಸಾಹಿತ್ಯದಲ್ಲಿ ವೈಚಾರಿಕ ಪ್ರಜ್ಞೆ, ವೈಜ್ಞಾನಿಕ ಮನೋಭಾವ ಇದೆ. ಅವರ ಸಾಹಿತ್ಯದಲ್ಲಿ ಅರ್ಥವಾಗದ ಪದಗಳ ಕುರಿತು - ಅಧ್ಯಾಪಕರಿಂದ ವಿವರಣೆ ಪಡೆದು ಅರ್ಥೈಸಿಕೊಳ್ಳಿ' ಎಂದು ಸಲಹೆ ನೀಡಿದರು.



ಪ್ರೊ.ರವಿವರ್ಮಾ ಕುಮಾರ್ ಅವರು ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ವೂಡೇ ಪಿ.ಕೃಷ್ಣ (ಎಡತುದಿ) ಅವರೊಂದಿಗೆ ಮಾತುಕತೆ ನಡೆಸಿದರು. ಪದವಿ ಪೂರ್ವ ಶಿಕ್ಷಣ ಇಲಾಖೆ ಜಂಟಿ ನಿರ್ದೇಶಕ ಎಸ್.ಆಕಾಶ್, ಉಪನಿರ್ದೇಶಕ ಅಶೋಕ್ ಕುಮಾರ್, ನೆಲಸಿರಿ ಟ್ರಸ್ಟ್ ಸಂಚಾಲಕ ಎಚ್.ವಿ.ಮಂಜುನಾಥ ಇದ್ದರು —ಪ್ರಜಾವಾಣಿ ಚಿತ್ರ

## ಕುವೆಂಪು ಓದು ಅಭಿಯಾನ

ನೆಲಸಿರಿ ಚಾರಿಟಬಲ್ ಟ್ರಸ್ಟ್, ಡಾ.ರಾಮಮನೋಹರ ಲೋಹಿಯಾ ಸಮತಾ ವಿದ್ಯಾಲಯ ಹಾಗೂ 'ಪ್ರಜಾವಾಣಿ' ಸಹಯೋಗದಲ್ಲಿ ಈ ಅಭಿಯಾನ ನಡೆಸಲಾಗುತ್ತಿದೆ.

ಟ್ರಸ್ಟ್ ಮತ್ತು ವಿದ್ಯಾಲಯ ಜಂಟಿಯಾಗಿ ಕುವೆಂಪು ಅವರ ವೈಚಾರಿಕ ಲೇಖನಗಳನ್ನು ಮುದ್ರಿಸಿ, ಕಿರುಹೊತ್ತಗೆಯನ್ನು ಪ್ರಕಟಿಸಿವೆ. ಅದನ್ನು ಆಸಕ್ತ ವಿದ್ಯಾರ್ಥಿಗಳಿಗೆ ಓದಲು ನೀಡಲಾಗುತ್ತಿದೆ. ನಂತರ ಓದಿನ ಅನುಭವವನ್ನು ಪ್ರಬಂಧ ರೂಪದಲ್ಲಿ ಅತ್ಯುತ್ತಮವಾಗಿ ಕಟ್ಟಿಕೊಡುವ ವಿದ್ಯಾರ್ಥಿಗಳಿಗೆ ಸೂಕ್ತ ಬಹುಮಾನ ನೀಡಲು ಟ್ರಸ್ಟ್ ನಿರ್ಧರಿಸಿದೆ.

ಈ ಅಭಿಯಾನವನ್ನು ಬೆಂಗಳೂರು ಉತ್ತರ.ಶೈಕ್ಷಣಿಕ ಜಿಲ್ಲೆಯ 350 ಪಿ.ಯು. ಕಾಲೇಜುಗಳಲ್ಲಿ ನಡೆಸಲು ಪದವಿಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರು ಸಹ ಕೈಜೋಡಿಸಿದ್ದಾರೆ. ಮಾಹಿತಿಗೆ: 8861136933

# ಕನ್ನಡಿಗರು ಸಂಸ್ಕಾರವಂತರು



**ಕೆಂಗೇರಿ:** ಕನ್ನಡಿಗರು ಸಂಸ್ಕಾರವಂತ ಜನ ಎಂದು ವಿದ್ಯಾವಾಚಸ್ಪತಿ ಡಾ.ಅರಳು ಮಲ್ಲಿಗೆ ಪಾರ್ಥ ಸಾರಥಿ ಹೇಳಿದರು.

ಕಲ್ಪತರು ಸಾಂಸ್ಕೃತಿಕ,ಸಾಮಜಿಕ ಮತ್ತು ಕ್ರೀಡಾ ಟ್ರಸ್ಟ್ ಮತ್ತು ಶೇಷಾದ್ರಿಪುರ ಅಕಾಡೆಮಿ ಆಫ್ ಬಿಸಿನೆಸ್ ಸ್ಟಡೀಸ್ ಜಂಟಿಯಾಗಿ ಕಾಲೇಜಿನ ಸಭಾಂಗಣದಲ್ಲಿ ಆಯೋಜಿಸಿದ್ದ 63ನೇ ಕನ್ನಡ ರಾಜ್ಯೋತ್ಸವ ಮತ್ತು ರಾಜ್ಯ ಸರ್ಕಾರದ ಪ್ರತಿಷ್ಠಿತ 2018ರರಾಜ್ಯೋತ್ಸವದಪ್ರಶಸ್ತಿಯನ್ನು ಪಡೆದಿರುವ ಡಾ.ಗೀತಾ ರಾಮಾನುಜಂ ಅವರನ್ನು ಅಭಿನಂದಿಸಿ ಮಾತನಾಡಿ, ಕ್ಷಣವು ಮರೀಚಿಕೆಯಾಗಿದ್ದ ಸಂದರ್ಭದಲ್ಲಿ ಡಾ.ಗೀತಾ ರಾಮಾನುಜಮ್ ಮತ್ತು ಪ್ರೊಡೇ ಕೃಷ್ಣ ಅವರು ಉತ್ತಮವಾದ ಗುಣ ಮಟ್ಟದ ಶಿಕ್ಷಣ ನೀಡುವ ಸಲುವಾಗಿ ತಮ್ಮನ್ನು ತಾವೇ ಅರ್ಪಿಸಿಕೊಂಡುವರು. ಆದರಲ್ಲು ಗೀತಾ ರಾಮಾನುಜಮ್ ಅವರು ತಮ್ಮ ಜೀವಿತ ವಲ್ಲಿ ಗಳಿಸಿದ್ದನ್ನೆಲ್ಲಾ ಸುರಿದು ಗುರುಕುಲ ಮಾದರಿಯಲ್ಲಿ ಶಿಕ್ಷಣ ಸಂಸ್ಥೆಯನ್ನು ತೆರೆದು ಹಳ್ಳಿಗಾಡಿನ ಮಕ್ಕಳಿಗೆ ಉಚಿತವಾಗಿ ಶಿಕ್ಷಣವನ್ನು ನೀಡಿ ಮಾದರಿಯಾಗಿದ್ದಾರೆ ಇಂತಹವರನ್ನು ಸರಕಾರ ಗುರ್ತಿಸಿ ರಾಜ್ಯ ಪ್ರಶಸ್ತಿ ನೀಡಿರುವುದು ಅಭಿನಂದನೀಯರು ಎಂದರು.

ಶೇಷಾದ್ರಿಪುರ ಶಿಕ್ಷಣ ದತ್ತಿ ಗೌರವ ಪ್ರದಾನ ಕಾರ್ಯದರ್ಶಿ ಡಾ.ಪ್ರೊಡೇ.ಪಿ.ಕೃಷ್ಣ ಮಾತನಾಡಿ, ಪ್ರಶಸ್ತಿಗಾಗಿನಾವು ಕೆಲಸಮಾಡದೆನಮ್ಮ ಕೆಲಸವನ್ನು ನಾವು ನಿಷ್ಠೆ ಪ್ರಮಾಣಿಕತೆಯಿಂದ ಮಾಡಿದರೆ ಅದೇ ನಮ್ಮನ್ನು ಹುಡುಕಿಕೊಂಡು ಬರುತ್ತದೆ. ಆ ನಿಟ್ಟಿನಲ್ಲಿ ಶಿಕ್ಷಣ, ಸಾಹಿತ್ಯ,ರಂಗಭೂಮಿಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದವರು ಡಾ.ಗೀತಾರಾಮನುಜಮ್. ಇಂತಹವರನ್ನು ಗುರುತಿಸಿ ಪ್ರಶಸ್ತಿ ನೀಡಿದ ಸರಕಾರ ಉತ್ತಮವಾದ ಕಾರ್ಯ ಮಾಡಿದೆ ಎಂದರು.




www.udayakala.news
ಗುರುವಾರ, ಡಿಸೆಂಬರ್ 27, 2018




ಗಾಂಧಿ ಶಾಂತಿ ಪ್ರತಿಷ್ಠಾನದ ವತಿಯಿಂದ ಗಾಂಧೀ ಭವನದಲ್ಲಿ ಡಬ್ಲ್ಯೂ.ಎಚ್ ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮ ನಡೆಯಿತು. ವೇದಿಕೆಯಲ್ಲಿ ಡಬ್ಲ್ಯೂ.ಎಚ್ ಹನುಮಂತಪ್ಪ ಸ್ಮಾರಕ ದತ್ತಿಯ ಮುಖಂಡರು ದೇವಕುಮಾರ್, ಗಾಂಧೀ ಭವನದ ಅಧ್ಯಕ್ಷರು ಡಾ. ವೂಡೇ.ಪಿ. ಕೃಷ್ಣ ಗಾಂಧೀ ಶಾಂತಿ ಪ್ರತಿಷ್ಠಾನದ ಅಧ್ಯಕ್ಷರು ಜೇರಿಗೆ ಲೋಕೇಶ್, ಕಾರ್ಯದರ್ಶಿ ಸಿಸಿರ, ಮುಖ್ಯ ಅತಿಥಿಯಾಗಿ ವರಮಾನ ತೆರಿಗೆ ಇಲಾಖೆ ನಿವೃತ್ತ ಪ್ರಧಾನ ಮುಖ್ಯ ಆಯುಕ್ತ ಡಾ. ಕೆ. ಸತ್ಯನಾರಾಯಣ ಮಾತನಾಡಿದರು.

ಬುಧವಾರ, 26, ಡಿಸೆಂಬರ್, 2018

# 'ಗಾಂಧೀಜಿ ಎಂದರೆ ರಸ್ತೆ ನೋಟುಗಳಲ್ಲ'

ಸಂ.ಕ. ಸಮಾಚಾರ ಬೆಂಗಳೂರು

ಸತ್ಯ, ಪ್ರಾಮಾಣಿಕತೆಯಿದ್ದಲ್ಲಿ ಗಾಂಧೀಜಿ ಯಾವುದೋ ಒಂದು ರೂಪದಲ್ಲಿ ಗೋಚರಿಸುತ್ತಾರೆ ಎಂದು ಲೇಖಕ ಡಾ. ಕೆ. ಸತ್ಯನಾರಾಯಣ ಅಭಿಪ್ರಾಯಪಟ್ಟರು.

ಗಾಂಧಿಭವನದಲ್ಲಿ ಆಯೋಜಿಸಿದ್ದ "ಗಾಂಧಿಯನ್ನು ಅಂತರ್ಗತ ಮಾಡಿಕೊಳ್ಳುವ ಬಗೆ" ಕುರಿತ ಉಪನ್ಯಾಸ ಕಾರ್ಯಕ್ರಮದಲ್ಲಿ ಮಾತನಾಡಿ, ಗಾಂಧೀಜಿ ಅಂದರೆ ಬರೀ ನೋಟು, ಪ್ರತಿಮೆ, ರಸ್ತೆ ಅಲ್ಲ. ಅವರನ್ನು ತಿಳಿದುಕೊಳ್ಳುವುದು ಸುಲಭದ ಮಾತಲ್ಲ. ಸಂವೇದನಾ ಶೀಲತೆ, ಕುತೂಹಲ, ಆಸಕ್ತಿ, ಗೌರವ ಇದ್ದರೆ ಅಂತರ್ಗತವಾಗಿ ಗಾಂಧೀಜಿ ನಮ್ಮನ್ನು ಸೇರಿಕೊಳ್ಳುತ್ತಾರೆ. ಒಂದು ದೇಶ ಒಂದು ಕುಟುಂಬ ಅಂತ ಭಾವಿಸಿದರೆ ಗಾಂಧೀಜಿ ನಮಗೆ ಹತ್ತಿರವಾಗುತ್ತಾರೆ ಎಂದರು.

ಗಾಂಧಿ ಹಾಗೂ ಅಂಬೇಡ್ಕರ್ ಅವರ ವಿಚಾರಧಾರೆಗಳು ಬೇರೆಯಾಗಿದ್ದರೂ, ಒಬ್ಬರನೊಬ್ಬರು ಪೋಷಿಸುತ್ತಿದ್ದರು. ಗಾಂಧಿ ಅವರು ಆಧ್ಯಾತ್ಮಿಕದಿಂದ ಲೌಕಿಕದಡೆಗೆ ಸಾಗಿದರೆ. ಅಂಬೇಡ್ಕರ್ ಅವರು ಲೌಕಿಕದಿಂದ ಆಧ್ಯಾತ್ಮಿಕದ ಕಡೆಗೆ ಸಾಗಿದರು. ನೆಹರೂ ಅವರು ಆಧುನಿಕತೆಯನ್ನು ಸ್ವಾಗತಿಸಿದರೆ ಗಾಂಧಿ ಅವರು ಆಧುನಿಕತೆಯ ಹೆಸರಿನಲ್ಲಿ ಮಾನವರನ್ನು ಯಂತ್ರಗಳಾಗಿ ಮಾಡುವುದನ್ನು ವಿರೋಧಿಸುತ್ತಿದ್ದರು ಎಂದವರು ವಿವರಿಸಿದರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೊಡೇ ಪಿ. ಕೃಷ್ಣ, ವೊಡೇ ಪ್ರತಿಷ್ಠಾನದ ಪ್ರತಿನಿಧಿ ಡಬ್ಲ್ಯೂ. ಹೆಚ್. ದೇವಕುಮಾರ್, ಗಾಂಧೀ ಶಾಂತಿ ಪ್ರತಿಷ್ಠಾನ ಅಧ್ಯಕ್ಷ ಜೀರಿಗೆ ಲೋಕೇಶ್ ಹಾಗೂ ಕಾರ್ಯದರ್ಶಿ ಎಸ್.ರಾಮಲಿಂಗೇಶ್ವರ ಮತ್ತಿತರರಿದ್ದರು.

ಮಂಗಳವಾರ, 25-12-2018



ಗಾಂಧಿ ಶಾಂತ ಪ್ರತಿಷ್ಠಾನ ಹಾಗೂ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಗಾಂಧಿಯನ್ನು ಅಂತರ್ಗತ ಮಾಡಿಕೊಳ್ಳುವ ಬಗೆ ವಿಷಯ ಕುರಿತು ಉಪನ್ಯಾಸ ನೀಡಿದ ಲೇಖಕ ಹಾಗೂ ವರಮಾನ ತೆರಿಗೆ ಇಲಾಖೆಯ ವಿಶ್ರಾಂತ ಪ್ರಧಾನ ಆಯುಕ್ತ ಡಾ.ಕೆ.ಸತ್ಯನಾರಾಯಣ ಅವರನ್ನು ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೂಡೆ.ಪಿ.ಕೃಷ್ಣ ಸನ್ಮಾನಿಸಿದರು. ಜೀರಿಗೆ ಲೋಕೇಶ್, ಡಬ್ಲ್ಯು.ಎಚ್.ಹನುಮಂತಪ್ಪ ಸ್ಮಾರಕ ದತ್ತಿ ಸಂಸ್ಥೆಯ ದೇವಕುಮಾರ್ ಉಪಸ್ಥಿತರಿದ್ದರು.

ಉದಯವಾಣಿ

ಮಂಗಳವಾರ, ಡಿಸೆಂಬರ್ 25, 2018

# ಗಾಂಧಿ ಅರ್ಥ ಮಾಡಿಕೊಳ್ಳುವುದು ಕಷ್ಟ

## ಪುಸ್ತಕ ಓದಿದರೆ ಅರ್ಥ ಮಾಡಿಕೊಂಡಂತಲ್ಲ: ಡಾ.ಕೆ. ಸತ್ಯನಾರಾಯಣ

**ಬೆಂಗಳೂರು**: ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಅವರ ಕುರಿತಾದ ಕಥೆ, ಪುಸ್ತಕ ಓದಿದ್ದೇವೆ ಎಂದ ಮಾತ್ರಕ್ಕೆ ಗಾಂಧೀಜಿ ಅವರನ್ನು ಅರ್ಥ ಮಾಡಿಕೊಂಡಿದ್ದೇವೆ ಎಂದು ಭಾವಿಸಿಕೊಳ್ಳುವುದು ದೊಡ್ಡ ತಪ್ಪು ಎಂದು ಲೇಖಕ ಡಾ.ಕೆ. ಸತ್ಯನಾರಾಯಣ ಅಭಿಪ್ರಾಯಪಟ್ಟರು.

ಗಾಂಧಿ ಶಾಂತಿ ಪ್ರತಿಷ್ಠಾನ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ವತಿಯಿಂದ ನಗರದ ಗಾಂಧಿ ಭವನದಲ್ಲಿ ಸೋಮವಾರ ಹಮ್ಮಿಕೊಂಡಿದ್ದ 'ಗಾಂಧಿಯನ್ನು ಅಂತರ್ಗತ ಮಾಡಿಕೊಳ್ಳುವ ಬಗೆ' ಕುರಿತ ಉಪನ್ಯಾಸ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಮಾತನಾಡಿದ ಅವರು, ಸುಮಾರು 50 ವರ್ಷ ಸಾರ್ವಜನಿಕ ಜೀವನದಲ್ಲಿದ್ದ, ಲಕ್ಷಾಂತರ ಪುಟಗಳಷ್ಟು ಬರಹ ರಚಿಸಿ, 38 ಸಾವಿರಕ್ಕೂ ಹೆಚ್ಚು ಪತ್ರಗಳನ್ನು ಬರೆದಿರುವ ಗಾಂಧೀಜಿ ಅವರನ್ನು ಅಂತರ್ಗತ ಮಾಡಿಕೊಳ್ಳುವುದು ಸುಲಭದ ಕೆಲಸವಲ್ಲ ಎಂದು ಹೇಳಿದರು.

**ಸಾಹಿತಿಗಳು ಅತರ್ಗತ ಮಾಡಿಕೊಳ್ಳಲಿಲ್ಲ:** ಅಕ್ಷರ ಹಾಗೂ ಸಾಂಸ್ಕೃತಿಕ ಲೋಕಕ್ಕೆ ಗಾಂಧೀಜಿ ಅವರು ತಮ್ಮದೇ ಆದ ಕೊಡುಗೆ ನೀಡಿದ್ದಾರೆ. ಆದರೆ, ಅವರನ್ನು ಕನ್ನಡದ ಕವಿಗಳು ತಮ್ಮ ಚಿಂತನೆಗಳಲ್ಲಿ ಅಂತರ್ಗತ ಮಾಡಿಕೊಳ್ಳಲಿಲ್ಲ. ಗಾಂಧೀಜಿಯನ್ನ ಬೇರೆ ವ್ಯಕ್ತಿಗಳ ಮಾದರಿಯಲ್ಲಿ ಸೃಜನಶೀಲ ಮನಷ್ಯನಾಗಿ ಸ್ವೀಕರಿಸಲಿಲ್ಲ ಏಕೆ ಎಂಬುದು ಈಗಲೂ ಪ್ರಶ್ನಾರ್ಥಕವಾಗಿ ಉಳಿದುಕೊಂಡಿದೆ ಎಂದರು.




ಗಾಂಧಿ ಶಾಂತಿ ಪ್ರತಿಷ್ಠಾನ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ವತಿಯಿಂದ ನಗರದ ಗಾಂಧಿ ಭವನದಲ್ಲಿ ಸೋಮವಾರ ಹಮ್ಮಿಕೊಂಡಿದ್ದ ಉಪನ್ಯಾಸ ಕಾರ್ಯಕ್ರಮದಲ್ಲಿ ಡಾ.ಕೆ. ಸತ್ಯನಾರಾಯಣ, ಜೀರಿಗೆ ಲೋಕೇಶ್, ದೇವಕುಮಾರ್, ಡಾ.ವೂಡೇ ಪಿ.ಕೃಷ್ಣ ಉಪಸ್ಥಿತರಿದ್ದರು.

ಗಾಂಧೀಜಿ ಅವರದ್ದು ಜಾತ್ಯಾತೀತ ಕಲ್ಪನೆಯಾಗಿತ್ತು. ಜಗತ್ತಿನ ಎಲ್ಲಾ ಧರ್ಮಗಳ ಸಾರ ಓದಿ, ಅವಲೋಕಿಸಿದ್ದರು. ಸಾಮಾನ್ಯ ವ್ಯಕ್ತಿ ನೆಮ್ಮದಿಯಿಂದ ಬದುಕು ಸಾಗಿಸಲು ಅವಕಾಶ ಕಲ್ಪಿಸುವುದೇ ಅತ್ಯುತ್ತಮ ಧರ್ಮ ಎಂದು ವ್ಯಾಖ್ಯಾನಿಸಿದ್ದರು. ಧಾರ್ಮಿಕ - ಸಾಂಸ್ಕೃತಿಕ ಬಹುತ್ವವನ್ನು ಗೌರವಿಸುವುದು ಸರ್ಕಾರದ ನೀತಿಯಾಗಬೇಕು ಎಂದು ಗಾಂಧೀಜಿ ಹೇಳುತ್ತಿದ್ದರು. ಸತ್ಯ ಹಾಗೂ ಅಹಿಂಸೆಯಿಂದ ಕೂಡಿದ ಜೀವನ ನಡೆಸಿದರೆ ಗಾಂಧಿ ನಮ್ಮನ್ನು ಹುಡುಕಿ ಬರುತ್ತಾರೆ ಎಂದು ಹೇಳಿದರು.

ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಜೀರಿಗೆ ಲೋಕೇಶ್ ಮತ್ತು ಡಬ್ಲ್ಯೂ ಎಚ್.ಹನುಮಂತಪ್ಪ ಸ್ಮಾರಕ ದತ್ತಿ ಸಂಸ್ಥೆಯ ದೇವಕುಮಾರ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಸ್ಥೆಯ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಉಪಸ್ಥಿತರಿದ್ದರು.

ಹೊಸ ದಿಗಂತ

ಮಂಗಳವಾರ
25 ಡಿಸೆಂಬರ್ 2018

## ಲೇಖಕ ಡಾ.ಕೆ.ಸತ್ಯನಾರಾಯಣ ಅಭಿಪ್ರಾಯ

# ಧರ್ಮ, ಸಂಸ್ಕೃತಿ ಗೌರವಿಸುವುದೇ ಜಾತ್ಯತೀತ

**ದಿಗಂತ ವರದಿ, ಬೆಂಗಳೂರು**

ಸಂಸ್ಕೃತಿ ಹಾಗೂ ಧರ್ಮವನ್ನು ಗೌರವಿಸುವುದೇ ಜಾತ್ಯಾತೀತತೆ ಎಂದು ಲೇಖಕ ಡಾ.ಕೆ. ಸತ್ಯನಾರಾಯಣ ಅಭಿಪ್ರಾಯಪಟ್ಟರು.

**ಗಾಂಧೀವಾದಿ. ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ**

ನಗರದ ಗಾಂಧೀ ಭವನದಲ್ಲಿ ಗಾಂಧೀ ಶಾಂತಿ ಪ್ರತಿಷ್ಠಾನ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಇವರ ಸಂಯುಕ್ತಾಶ್ರಯದಲ್ಲಿ ವೂಡೇ ಪ್ರತಿಷ್ಠಾನ ಏರ್ಪಡಿಸಿದ್ದ ಗಾಂಧೀ ವಾದಿ ಡಬ್ಲ್ಯು.ಎಚ್. ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸದಲ್ಲಿ -ಗಾಂಧಿಯನ್ನು ಅಂತರ್ಗತ ಮಾಡಿಕೊಳ್ಳುವ ಬಗೆ ವಿಷಯ ಕುರಿತು ಉಪನ್ಯಾಸ ನೀಡಿದರು.

ಗಾಂಧೀಜಿಯವರ ಜಾತ್ಯಾತೀತತೆಗೂ ಹಾಗೂ ಇಂದಿನ ಸರ್ಕಾರಕ್ಕೂ-ಧರ್ಮಕ್ಕೂ ಸಂಬಂಧವಿಲ್ಲದಂತಹ ಸ್ಥಿತಿ ಇದೆ ಎಂದು ಹೇಳಲಾಗುತ್ತದೆ ಎಂದರು.

ಆದರೆ, ಗಾಧೀಜಿಯವರ ಜಾತ್ಯಾತೀತತೆ ಕಲ್ಪನೆಯೇ ಬೇರೆ. ಸರ್ಕಾರ ನೀತಿ ಬದ್ಧ ಹಾಗೂ ಧರ್ಮಬದ್ಧವಾಗಿರುವುದು, ಸಾಂಸ್ಕೃತಿಕ ಹಾಗೂ ಧಾರ್ಮಿಕ ಬಹುತ್ವವನ್ನು ಗೌರವಿಸುವುದು ಜಾತ್ಯಾತೀತತೆ. ಇಂದು ಗಾಂಧೀಜಿಯವರ ಜಾತ್ಯಾತೀತತೆಯನ್ನು ಬಿಟ್ಟು ಪಾಶ್ಚಿಮಾತ್ಯ ಜಾತ್ಯಾತೀತತೆಯ ಧರ್ಮಕ್ಕೆ ವಿಮುಖವಾಗಿ ನಡೆಯುತ್ತಿದ್ದೇವೆ. ನಾವು ಗಾಂಧಿಯನ್ನು ಅಂತರ್ಗತ ಮಾಡಿಕೊಂಡಿಲ್ಲ ಎಂಬುದು ಇದರಿಂದಲೇ ತಿಳಿಯುತ್ತದೆ ಎಂದರು.

ಗಾಂಧೀಜಿಯವರ ಸಾವಿನಲ್ಲಿ ಭಾರತದ ನಮ್ಮೆಲ್ಲರ ಸಾಮಾಜಿಕ ಜವಾಬ್ದಾರಿ ಇದೆ. ಅವರು ರೋಗದಿಂದ ನರಳಿ ಸಾಯಲು ಬಯಸಿದವರಲ್ಲ.

ಬಲಿದಾನದ ಮೂಲಕ ಸಾವನ್ನು ಬಯಸಿದವರು. ಎಂದು ಗಾಂಧೀ ಜಿಯವರ ವಿಚಾರಧಾರೆಗಳನ್ನು ಡಾ.ಕೆ.ಸತ್ಯನಾರಾಯಣ ತಮ್ಮ ಉಪನ್ಯಾಸದಲ್ಲಿ ತಿಳಿಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಮಾತನಾಡಿದರು. ಗಾಂಧೀ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಜೇರಿಗೆ ಲೋಕೇಶ್, ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣ, ಗಾಂಧೀ ಶಾಂತಿ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಎಸ್. ರಾಮಲಿಂಗೇಶ್ವರ(ಸಿಸಿರಾ), ವೂಡೇ ಪ್ರತಿಷ್ಠಾನದ ದತ್ತಿದಾನಿಗಳ ಪ್ರತಿನಿಧಿ ಡಬ್ಲ್ಯು.ಹೆಚ್. ದೇವಕುಮಾರ್, ಮಲ್ಲೇಪುರಂ ವೆಂಕಟೇಶ್, ನೂರಾರು ಗಾಂಧೀ ವಾದಿಗಳು ಶೇಷಾದ್ರಿಪುರಂ ಶಾಲೆ ಹಾಗೂ ಕಾಲೇಜು ವಿದ್ಯಾರ್ಥಿಗಳು ಹಾಜರಿದ್ದರು.



ನಗರದ ಗಾಂಧೀ ಭವನದಲ್ಲಿ ಗಾಂಧೀ ಶಾಂತಿ ಪ್ರತಿಷ್ಠಾನ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಹಾಗೂ ವೂಡೇ ಪ್ರತಿಷ್ಠಾನ ಇವರ ಸಂಯುಕ್ತಾಶ್ರಯದಲ್ಲಿ ಏರ್ಪಡಿಸಲಾಗಿದ್ದ ಗಾಂಧೀ ವಾದಿ ಡಬ್ಲ್ಯು.ಎಚ್.ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸದಲ್ಲಿ ಲೇಖಕ ಡಾ.ಕೆ. ಸತ್ಯನಾರಾಯಣ ಅವರನ್ನು ಅಭಿನಂದಿಸಲಾಯಿತು.

**ಸ್ವಾತಂತ್ರ್ಯ ಪಡೆದು ಆತ್ಮಗೌರವದಿಂದ ಬದುಕಬೇಕು. ಅಸ್ಪೃಶ್ಯತೆ, ಸ್ತ್ರೀ ಶೋಷಣೆ, ಹೀಗೆ ಎಲ್ಲವನ್ನು ತೊಡೆದು ಹಾಕಿ ನಮ್ಮ ದೇಶ ಒಂದು ಕುಟುಂಬವಾಗಿ, ಸಮುದಾಯವಾಗಿ ಬದುಕಬೇಕು ಎಂಬುದನ್ನು ಗಾಂಧೀಜಿ ಅಂತರ್ಗತಗೊಳಿಸಿಕೊಂಡಿದ್ದರಿಂದಲೇ ಅವರು ಮಹಾತ್ಮರು ಎಂದು ಪ್ರಖ್ಯಾತರಾದರು.**

**ಲೇಖಕ**

ಕನ್ನಡಪ್ರಭ

ಮಂಗಳವಾರ 25.12.2018

ಗಾಂಧೀಜಿಯನ್ನು ಸೃಜನಶೀಲ ಮನುಷ್ಯನಾಗಿ ಸ್ವೀಕರಿಸಲಿಲ್ಲ: ಡಾ.ಕೆ. ಸತ್ಯನಾರಾಯಣ

# ಗಾಂಧಿಯನ್ನು ಅಂತರ್ಗತ ಮಾಡಿಕೊಳ್ಳದ ಸಾಹಿತಿಗಳು

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಕನ್ನಡ ಸಾಹಿತಿಗಳು ತಮ್ಮ ಚಿಂತನೆಗಳಲ್ಲಿ ಮಹಾತ್ಮ ಗಾಂಧೀಜಿಯನು ಅಂತರ್ಗತ ಮಾಡಿಕೊಳ್ಳಲಿಲ್ಲ ಎಂದು ಲೇಖಕ ಹಾಗೂ ವರಮಾನ ತೆರಿಗೆ ಇಲಾಖೆ ವಿಶ್ರಾಂತ ಪ್ರಧಾನ ಆಯುಕ್ತ ಡಾ.ಕೆ. ಸತ್ಯನಾರಾಯಣ ತಿಳಿಸಿದ್ದಾರೆ.

ಗಾಂಧಿ ಶಾಂತಿ ಪ್ರತಿಷ್ಠಾನ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸೋಮವಾರ ನಗರದ ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದ ಬ್ರಹ್ಮ ಸಮಾಜದ ಮುಖಂಡ ಹಾಗೂ ಗಾಂಧಿ ಅನುಯಾಯಿ ಡಬ್ಲ್ಯೂ.ಎಚ್.ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ 'ಗಾಂಧಿಯನ್ನು ಅಂತರ್ಗತ ಮಾಡಿಕೊಳ್ಳುವ ಬಗೆ' ವಿಷಯ ಕುರಿತು ಉಪನ್ಯಾಸ ನೀಡಿದರು.

ಗಾಂಧೀಜಿ ಅವರ ಸಾಕಷ್ಟು ಪುಸ್ತಕ ಓದಿದ್ದೇವೆ ಹಾಗೂ ಕಥೆ ಕೇಳಿದ್ದೇವೆ ಎಂದ ಮಾತ್ರಕ್ಕೆ ಗಾಂಧಿ ಬಗ್ಗೆ ತಿಳಿದುಕೊಂಡು, ಅವರನ್ನು ಅಂತರ್ಗತ ಮಾಡಿಕೊಂಡಿದ್ದೇವೆ ಎಂದು ಭಾವಿಸುವುದು ತಪ್ಪು. ಒಂದೂಕಾಲು ಲಕ್ಷ ಪುಟಗಳಷ್ಟು ಬರಹ ರಚಿಸಿದ ಮತ್ತು 38 ಸಾವಿರ ಪತ್ರ ಬರೆದ ಗಾಂಧೀಜಿಯನ್ನು ಅಂತರ್ಗತ ಮಾಡಿಕೊಳ್ಳುವುದು ಸುಲಭವಲ್ಲ ಎಂದರು. ಸಾಹಿತ್ಯ ಹಾಗೂ ಸಾಂಸ್ಕೃತಿಕ ಲೋಕಕ್ಕೆ ಅಪಾರ ಕೊಡುಗೆ ನೀಡಿರುವ ಗಾಂಧೀಜಿ ಅವರನ್ನು ಕನ್ನಡದ ಕವಿಗಳು ತಮ್ಮ ಚಿಂತನೆಗಳಲ್ಲಿ ಅಂತರ್ಗತ ಮಾಡಿಕೊಳ್ಳಲಿಲ್ಲ. ಗಾಂಧೀಜಿಯನ್ನು ಬೇರೆ ವ್ಯಕ್ತಿಗಳ ಮಾದರಿಯಲ್ಲಿ ಸೃಜನಶೀಲ ಮನುಷ್ಯನಾಗಿ ಸ್ವೀಕರಿಸಲಿಲ್ಲ. ಇದು ಏಕೆ ಎಂಬುದು ಈಗಲೂ ಪ್ರಶ್ನಾರ್ಥಕವಾಗಿ ಉಳಿದುಕೊಂಡಿದೆ ಎಂದು ತಿಳಿಸಿದರು. ನಮ್ಮ ಆತ್ಮ, ಆಸೆ ಹಾಗೂ ದೌರ್ಬಲ್ಯಗಳನ್ನು ಓರೆಗೆ ಹಚ್ಚಿ ಪರೀಕ್ಷಿಸಿಕೊಂಡು ಸರಿಯಾದ ಜೀವನ ಕ್ರಮ ನಡೆಸಿದರೆ ಮತ್ತು ದೇಶವನ್ನು ಒಂದು ಕುಟುಂಬ ಹಾಗೂ ಸಮುದಾಯ ಎಂದು ಭಾವಿಸಿದರೆ ಗಾಂಧಿ ನಮ್ಮೊಳಗೆ ಪ್ರವೇಶಿಸುತ್ತಾರೆ. ಸ್ನೇಹಿತ, ಹಿತೈಷಿ ಹಾಗೂ ಗುರುವಾಗಿಯೋ ನಮ್ಮೊಂದಿಗೆ ಗಾಂಧೀಜಿ ಇರಲಿದ್ದಾರೆ. ನಿಸ್ವಾರ್ಥ, ನಿಷ್ಠೆ, ಪಾರದರ್ಶಕ, ಸತ್ಯ ಹಾಗೂ ಅಹಿಂಸೆಯಿಂದ ಕೂಡಿದ ಜೀವನ ನಡೆಸಿದರೆ ಗಾಂಧಿ ನಮ್ಮನ್ನು ಹುಡುಕಿ ಬರುತ್ತಾರೆ ಎಂದು ತಿಳಿಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಸ್ಥೆಯ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಜೇರಿಗೆ ಲೋಕೇಶ್ ಮತ್ತು ಡಬ್ಲ್ಯೂ. ಎಚ್.ಹನುಮಂತಪ್ಪ ಸ್ಮಾರಕ ದತ್ತಿ ಸಂಸ್ಥೆಯ ದೇವಕುಮಾರ್ ಉಪಸ್ಥಿತರಿದ್ದರು.



'ಗಾಂಧಿಯನ್ನು ಅಂತರ್ಗತ ಮಾಡಿಕೊಳ್ಳುವ ಬಗೆ' ವಿಷಯ ಕುರಿತು ಉಪನ್ಯಾಸ ನೀಡಿದ ಲೇಖಕ ಹಾಗೂ ವರಮಾನ ತೆರಿಗೆ ಇಲಾಖೆ ವಿಶ್ರಾಂತ ಪ್ರಧಾನ ಆಯುಕ್ತ ಡಾ.ಕೆ.ಸತ್ಯನಾರಾಯಣ ಅವರನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಸ್ಥೆಯ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಸನ್ಮಾನಿಸಿದರು. ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಜೇರಿಗೆ ಲೋಕೇಶ್ ಮತ್ತು ಡಬ್ಲ್ಯೂ. ಎಚ್.ಹನುಮಂತಪ್ಪ ಸ್ಮಾರಕ ದತ್ತಿ ಸಂಸ್ಥೆಯ ದೇವಕುಮಾರ್ ಉಪಸ್ಥಿತರಿದ್ದರು.

ವಿಶ್ವವಾಣಿ
ಬೆಂಗಳೂರು
vishwavani.news
25.12.2018 ಮಂಗಳವಾರ

# ಗಾಂಧೀ ಭವನದಲ್ಲಿ ದತ್ತಿ ಉಪನ್ಯಾಸ

**ಬೆಂಗಳೂರು:** ಗಾಂಧೀ ಶಾಂತಿ ಪ್ರತಿಷ್ಠಾನ, ಬೆಂಗಳೂರು ಕೇಂದ್ರ ಮತ್ತು ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಸಹಯೋಗದೊಂದಿಗೆ ಬ್ರಹ್ಮ ಸಮಾಜದ ಮುಖಂಡರು ಹಾಗೂ ಗಾಂಧಿವಾದಿ ಡಬ್ಲ್ಯೂ.ಎಚ್. ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸವನ್ನು ನಗರದ ಕುಮಾರಪಾರ್ಕ್ ಗಾಂಧೀ ಭವನದಲ್ಲಿ ಆಯೋಜಿಸಲಾಗಿತ್ತು.

ಗಾಂಧಿಯನ್ನು ಅಂತರ್ಗತ ಮಾಡಿಕೊಳ್ಳುವ ಬಗೆ ಕುರಿತು ಲೇಖಕರು ಮತ್ತು ವರಮಾನ ತೆರಿಗೆ ಇಲಾಖೆಯ ವಿಶ್ರಾಂತ ಪ್ರಧಾನ ಮುಖ್ಯ ಆಯುಕ್ತರಾದ ಡಾ. ಕೆ.ಸತ್ಯನಾರಾಯಣ ಉಪನ್ಯಾಸ ನೀಡಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ ಅಧ್ಯಕ್ಷತೆ ವಹಿಸಿದ್ದ ಸಮಾರಂಭದಲ್ಲಿ ಗಾಂಧೀ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಜೀರಿಗೆ ಲೋಕೇಶ್ ಪ್ರಾಸ್ತಾವಿಕ ನುಡಿಗಳನ್ನಾಡಿದರು. ದತ್ತಿದಾನಿಗಳ ಪ್ರತಿನಿಧಿ ವೂಡೇ ಪ್ರತಿಷ್ಠಾನದ ಡಬ್ಲ್ಯೂ.ಎಚ್ .ದೇವಕುಮಾರ್ ಮತ್ತು ಕಾರ್ಯದರ್ಶಿ ಸಿಸಿರಾ ಇದ್ದರು.

ಸುವರ್ಣ
[illegible] ಕರ್ನಾಟಕ

ಭಾನುವಾರ, 16 ಡಿಸೆಂಬರ್ 2018



## ಕೆರಿಯರ್ ಉತ್ಸವ್....

ನಿಮ್ಹಾನ್ಸ್ ಸಭಾಂಗಣದಲ್ಲಿ ಹಮ್ಮಿಕೊಂಡಿದ್ದ 'ಕೆರಿಯರ್ ಉತ್ಸವ್–18' ಅನ್ನು ಶಿಕ್ಷಣ ತಜ್ಞ ವೂಡೆ ಪಿ. ಕೃಷ್ಣ ಉದ್ಘಾಟಿಸಿದರು. ಗೌರವ್ ಗೋಪಾಲ್‌ದಾಸ್, ಕೌಟಲ್ಯ ಪಂಡಿತ್ ಮತ್ತಿತರರು ಉಪಸ್ಥಿತರಿದ್ದರು.

15-12-2018



# ಕೆರಿಯರ್ ಉತ್ಸವ್

ನಿಮ್ಹಾನ್ಸ್ ಸಭಾಂಗಣದಲ್ಲಿ ಹಮ್ಮಿಕೊಂಡಿದ್ದ 'ಕೆರಿಯರ್ ಉತ್ಸವ್ **-18**' ಅನ್ನು ಶಿಕ್ಷಣ ತಜ್ಞ ವೂಡೆ ಪಿ.ಕೃಷ್ಣ ಉದ್ಘಾಟಿಸಿದರು. ಗೌರವ್ ಗೋಪಾಲ್‌ದಾಸ್, ಕೌಟಿಲ್ಯ ಪಂಡಿತ್ ಮತ್ತಿತರರು ಈ ಸಂದರ್ಭದಲ್ಲಿದ್ದರು.

ಹೊಸ ದಿಗಂತ ಮಂಗಳವಾರ, 11 ಡಿಸೆಂಬರ್ 2018

## ನಾಡೋಜ ಡಾ.ಪಾಟೀಲ್ ಪುಟ್ಟಪ್ಪ ಬೇಸರ

# ಗ್ರಾಮೀಣ ಪ್ರದೇಶದಲ್ಲೂ ಸ್ವದೇಶಿ ವಸ್ತುಗಳು ಮಾಯ



ಅನೇಕರು ಟಿಪ್ಪು ಜಯಂತಿಯನ್ನು ವಿರೋಧಿಸಿದರು. ಆದರೆ ಪ್ರಥಮ ಪ್ರಯೋಗವಾಗಿ ಟಿಪ್ಪು ಮದ್ಯ ಬಂದ್ ಮಾಡಿದ್ದರು.

❑ ನಾಡೋಜ ಡಾ. ಪಾಟೀಲ ಪುಟ್ಟಪ್ಪ

**ಬೆಂಗಳೂರು:** ಇಂದು ಗ್ರಾಮಾಂತರ ಪ್ರದೇಶಗಳಲ್ಲೂ ಸ್ವದೇಶಿ ವಸ್ತುಗಳು ಕಾಣದಂತಾಗಿವೆ ಎಂದು ನಾಡೋಜ ಡಾ.ಪಾಟೀಲ್ ಪುಟ್ಟಪ್ಪ ಬೇಸರ ವ್ಯಕ್ತಪಡಿಸಿದರು.

ಗಾಂಧಿ ಭವನದಲ್ಲಿ ಬಾಪು 150ನೇ ವರ್ಷಾಚರಣೆ ಅಂಗವಾಗಿ ಗಾಂಧೀ ಅಂಗಳದಲ್ಲಿ ಗಾಂಧೀ ಚಿಂತಕರು ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ನಾನು ನನ್ನ 14 ನೇ ವರ್ಷದಿಂದ ಗಾಂಧಿ ಆದರ್ಶಗಳನ್ನು ಪಾಲಿಸುತ್ತಿದ್ದೇನೆ. ಇಂದಿನಿಂದ ಇಂದಿನವರೆಗೂ ನಾನು ಖಾದಿ ಬಟ್ಟೆಯನ್ನೇ ತೊಡುತ್ತಿದ್ದೇನೆ. ಎಲ್ಲರೂ ಖಾದಿ ತೊಡುವುದರಿಂದ ನೇಕಾರರ ಅಭಿವೃದ್ಧಿ ಸಾಧ್ಯವಾಗುತ್ತದೆ. ಇಂದಿನಿಂದ ಪ್ರತಿಯೊಬ್ಬರೂ ಖಾದಿ ಬಟ್ಟೆಯನ್ನೇ ತೊಡುವ ಪ್ರತಿಜ್ಞೆ ಮಾಡಬೇಕು. ಗಾಂಧೀಜಿಯವರನ್ನು ಅನುಸರಿಸುವುದು ಅಷ್ಟು ಸುಲಭದ ಮಾತಲ್ಲ. ನಾವು ಅಪ್ಪಟ ಭಾರತೀಯರಾಗಬೇಕೆಂದರೆ ಮೊದಲು ಸ್ವದೇಶೀ ವಸ್ತುಗಳನ್ನು ಬಳಸುವ ಅಭ್ಯಾಸ ಮಾಡಿಕೊಳ್ಳಬೇಕು. ನಮ್ಮಲ್ಲಿ ವಿದೇಶೀ ವಸ್ತುಗಳ ವ್ಯಾಮೋಹ ಅತಿಯಾಗಿದೆ ಎಂದರು.

ಕಾರ್ಯಕ್ರಮದಲ್ಲಿ ಕರ್ನಾಟಕ ವಿವಿ ನಿವೃತ್ತ ಕನ್ನಡ ಪ್ರಾಧ್ಯಾಪಕ ಪ್ರೊ. ಶಾಂತಿನಾಥ ದಿಬ್ಬದ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

ಪ್ರಜಾವಾಣಿ ಮಂಗಳವಾರ ○ ಡಿಸೆಂಬರ್ 11, 2018

# ಪಾಪು ಬಾಯಲ್ಲಿ ಬಾಪು ಮಾತು

## 'ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು' ಸಂವಾದ

ಪ್ರಜಾವಾಣಿ ವಾರ್ತೆ

ಬೆಂಗಳೂರು: ಸಮಗ್ರ ಕರ್ನಾಟಕದ ಪರಿಕಲ್ಪನೆ ನಮ್ಮ ಸರ್ಕಾರಕ್ಕೆ ಅರಿವಾಗಬೇಕು. ಆಗ ಗಾಂಧಿ ಕನಸು ನನಸಾಗಿಸಬಹುದು.

– ಇದು ಪತ್ರಕರ್ತ ಪಾಟೀಲ ಪುಟ್ಟಪ್ಪ ಅವರ ಮಾತು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಆಶ್ರಯದಲ್ಲಿ 'ಬಾ ಬಾಪು' 150ನೇ ವರ್ಷಾಚರಣೆ ಅಂಗವಾಗಿ ಹಮ್ಮಿಕೊಂಡ ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು ಶೀರ್ಷಿಕೆಯ ಸಂವಾದದಲ್ಲಿ ಸೋಮವಾರ ಅವರು ಮಾತನಾಡಿದರು. ಬೇರೆ ಬೇರೆ ಶಾಲೆಗಳ ಮಕ್ಕಳು ಕುತೂಹಲದ ಪ್ರಶ್ನೆ ಕೇಳಿದರು. ಬಾಪು ಮತ್ತು ಪಾಪು ಸಂವಾದದ ಝಲಕ್ ಹೀಗಿದೆ.

'10ನೇ ವಯಸ್ಸಿನವನಿದ್ದಾಗ ಗಾಂಧೀಜಿ ಅವರು ವಿದೇಶಿ ವಸ್ತುಗಳನ್ನು ತ್ಯಜಿಸುವಂತೆ ಕರೆ ನೀಡಿದರು. ಅಂದೇ ವಿದೇಶಿ ಬಟ್ಟೆಗಳನ್ನು ತ್ಯಜಿಸಿದೆ. ನನಗೆ ಖಾದಿ ಬಟ್ಟೆಯನ್ನೇ ಕೊಡಿ. ಇಲ್ಲವಾದರೆ ಗೊಮ್ಮಟನಂತಿರಬೇಕಾಗುತ್ತದೆ ಎಂದು ಹಿರಿಯರ ಮೇಲೆ ಒತ್ತಡ ಹೇರಿದೆ. ಅಂದಿನಿಂದ ಇಂದಿನವರೆಗೂ ನಾನು ಖಾದಿ ಬಟ್ಟೆಯನ್ನೇ ತೊಡುತ್ತಿದ್ದೇನೆ. ಮನಸ್ಸು ಮಾಡಿದರೆ ಇದ್ಯಾವುದೂ ಕಷ್ಟವಲ್ಲ. ಖಾದಿಯ ಒಂದು ಬಟ್ಟೆಯಾದರೂ ನಿಮ್ಮ ಬಳಿಯಿರಲಿ'.

○ **ಸ್ವಾತಂತ್ರ್ಯ ತಂದುಕೊಟ್ಟ ಗಾಂಧಿಯನ್ನು ನಾಥೂರಾಮ ಗೋಡ್ಸೆ ಏಕೆ ಕೊಂದ?**

**ಪಾಪು:** ನೋಡಿ ರಾಜಕಾರಣಿಗಳು ಒಬ್ಬೊಬ್ಬರು ಒಂದೊಂದು ಕಥೆ ಹೇಳುತ್ತಾರೆ. ಬೇಕಾದ ಕಥೆ ಕಟ್ಟುತ್ತಾರೆ. ಭಾರತ ಕೆಟ್ಟು ಹೋಗಲು ಗಾಂಧೀಜಿಯೇ ಕಾರಣ ಎಂದವರೂ ಇದ್ದಾರೆ. ದೇಶ ವಿಭಜನೆಯ ಕಾಲದಲ್ಲಿ ಇಲ್ಲಿಂದ ತೆರಳುವ ಮುಸ್ಲಿಮರಿಗೆ ಇಂತಿಷ್ಟು ನಗದು ಕೊಡಬೇಕು ಎಂದು ಗಾಂಧಿ ಪ್ರತಿಪಾದಿಸಿದ್ದರು. ಇಂಥ ಹಲವು ಕಾರಣಗಳನ್ನು ಹಲವರು ಹೇಳುತ್ತಾರೆ. ಆದರೆ, ಅದ್ಯಾವುದೂ ಆ ಕೃತ್ಯವನ್ನು ಸಮರ್ಥಿಸುವಂಥದ್ದಲ್ಲ.

○ **ನೀವು ಹೇಗೆ ಇಷ್ಟೆಲ್ಲಾ ಬರೆಯುತ್ತೀರಿ?**

**ಪಾಪು:** ನನ್ನ ದಿನಚರಿ ಆರಂಭವಾಗುವುದೇ ಬರವಣಿಗೆಯಿಂದ

○ **ನಿಮ್ಮ ಆರೋಗ್ಯದ ಗುಟ್ಟು?**

**ಪಾಪು:** ಕಡಿಮೆ ತಿನ್ನಿ, ಹೆಚ್ಚು ದಿನ ಬಾಳುತ್ತೀರಿ.

'ಎಸ್. ನಿಜಲಿಂಗಪ್ಪ ಅವರನ್ನು ಕರ್ನಾಟಕದ ಮೊದಲ ಮುಖ್ಯಮಂತ್ರಿ ಎಂದು ಒಪ್ಪಿಕೊಳ್ಳಬೇಕು. ಆಗಲೇ ನಾನು ಬಸವಶ್ರೀ ಪ್ರಶಸ್ತಿ ಸ್ವೀಕರಿಸುತ್ತೇನೆ ಎಂದು ಹೇಳಿದ್ದೆ, ಈಗಲೂ ಆ ಮಾತಿಗೆ ಬದ್ಧ.

ಪ್ರೊ.ಶಾಂತಿನಾಥ ದಿಬ್ಬದ ಕಾರ್ಯಕ್ರಮ ಉದ್ಘಾಟಿಸಿದರು. ಡಾ.ಲೋಹಿತ ನಾಯ್ಕ ಸಂವಾದ ನಡೆಸಿಕೊಟ್ಟರು. ವೂಡೆ ಪಿ.ಕೃಷ್ಣ ಉಪಸ್ಥಿತರಿದ್ದರು.



ಸಂವಾದ ಕಾರ್ಯಕ್ರಮದಲ್ಲಿ ಪತ್ರಕರ್ತ ಡಾ.ಪಾಟೀಲ ಪುಟ್ಟಪ್ಪ ಅವರು ಗಾಂಧಿ ಪ್ರತಿಮೆಗೆ ಪುಷ್ಪಾರ್ಚನೆ ಮಾಡಿದರು. (ಎಡದಿಂದ) ಇಂದಿರಾ ಕೃಷ್ಣಪ್ಪ, ಡಾ.ಲೋಹಿತ ನಾಯ್ಕ, ಎಂ.ವಿ. ರಾಜಶೇಖರನ್, ಪ್ರೊ.ಶಾಂತಿನಾಥ ದಿಬ್ಬದ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ. ಕೃಷ್ಣ ಇದ್ದಾರೆ –ಪ್ರಜಾವಾಣಿ ಚಿತ್ರ



ಗಾಂಧಿ ಭವನದಲ್ಲಿ ಮಹಾತ್ಮ ಗಾಂಧೀಜಿಯವರ 150ನೇ ವರ್ಷಾಚರಣೆ ಅಂಗವಾಗಿ ಹಮ್ಮಿಕೊಂಡಿದ್ದ 'ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು' ಸಂವಾದ ಕಾರ್ಯಕ್ರಮದಲ್ಲಿ ನಾಡೋಜ ಪಾಟೀಲ್ ಪುಟ್ಟಪ್ಪ, ಮಾಜಿ ಕೇಂದ್ರ ಸಚಿವ ಎಂ.ವಿ ರಾಜಶೇಖರನ್ ಗಾಂಧಿ ಪ್ರತಿಮೆಗೆ ಪುಷ್ಪನಮನ ಸಲ್ಲಿಸಿದರು.

# ವಿದೇಶಿ ವಸ್ತುಗಳಿಗೆ ಮರುಳಾಗದಿರಿ

ಸಂ.ಕ ಸಮಾಚಾರ ಬೆಂಗಳೂರು

ವಿದೇಶಿ ವಸ್ತುಗಳಿಗೆ ಮರುಳಾಗದೆ ಸ್ವದೇಶಿ ವಸ್ತುಗಳನ್ನು ಖರೀದಿಸಿ ಗ್ರಾಮೀಣ ನೇಕಾರರ ಜೀವನವನ್ನು ಅಭಿವೃದ್ಧಿಗೊಳಿಸಿ ಎಂದು ಹಿರಿಯ ಸ್ವಾತಂತ್ರ್ಯ ಹೋರಾಟಗಾರ ನಾಡೋಜ ಡಾ. ಪಾಟೀಲ ಪುಟ್ಟಪ್ಪ ತಿಳಿಸಿದರು.

ಗಾಂಧಿ ಭವನದಲ್ಲಿ ಮಹಾತ್ಮ ಗಾಂಧೀಜಿಯವರ 150ನೇ ವರ್ಷಾಚರಣೆ ಅಂಗವಾಗಿ ಹಮ್ಮಿಕೊಂಡಿದ್ದ 'ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು' ಸಂವಾದದಲ್ಲಿ ಮಾತನಾಡಿದ ಅವರು ಭಾರತೀಯರಿಗೆ ಇಂದು ವಿದೇಶಿ ವಸ್ತುಗಳನ್ನು ಕೊಳ್ಳುವ ಮನಸ್ಥಿತಿಯಿದೆ. ಗ್ರಾಮೀಣ ಜನತೆಯೂ ಸ್ವದೇಶಿತನ ಮಾಯಾವಾಗುತ್ತಿರುವುದು ವಿಷಾದನೀಯ. ಅಂದು ಮಹಾತ್ಮ ಗಾಂಧೀಜಿಮಾತಿನಿಂದ ಪ್ರೇರಿಪಿತನಾಗಿ ಇಲ್ಲಿಯವರೆಗೂ ಖಾದಿ ಬಟ್ಟೆಯನ್ನು ಬಿಟ್ಟು ಬೇರೆ ವಸ್ತ್ರವನ್ನು ಧರಿಸಿಲ್ಲ. ನಮ್ಮ ಮನೆಯವರಿಗೂ ಸಹ ಖಾದಿ ವಸ್ತ್ರ ಧರಿಸುವಂತೆ ಒತ್ತಾಯಿಸಿದೆ. ಇಲ್ಲಿಯವರೆಗೂ ಅವರ ಸಂಸ್ಕೃತಿಯನ್ನು ರೂಢಿಸಿಕೊಂಡು ಬಂದಿದ್ದೇನೆ ಎಂದರು.

ಸ್ವದೇಶಿ ವಸ್ತುಗಳನ್ನು ಕೊಳ್ಳುವ ಮೂಲಕ ದೇಶ ಕಟ್ಟುವ ಕೆಲಸಕ್ಕೆ ಮುಂದಾಗಬೇಕು ಎಲ್ಲಿಯವರೆಗೆ ವಿದೇಶಿ ವಸ್ತುಗಳ ವ್ಯಾಮೋಹ ಹೋಗುವುದಿಲ್ಲ ಅಲ್ಲಿಯವರೆಗೆ ಗಾಂಧೀಜಿಯವರ ಕನಸು ಗ್ರಾಮ ಸ್ವರಾಜ್ ಪರಿಕಲ್ಪನೆಗೆ ಅರ್ಥ ಬರುವುದಿಲ್ಲ.

ಯುವ ಪೀಳಿಗೆಗೆ ಮಹಾತ್ಮಗಾಂಧೀಜಿಯವರು ಆದರ್ಶ ವ್ಯಕ್ತಿಯಾಗಿದ್ದಾರೆ. ಮಾಜಿ ಕೇಂದ್ರ ಸಚಿವ ಎಂ.ವಿ ರಾಜಶೇಖರನ್, ಕರ್ನಾಟಕ ವಿವಿಯ ನಿವೃತ್ತ ಕನ್ನಡ ಪ್ರಾಧ್ಯಾಪಕ ಪ್ರೊ.ಶಾಂತಿನಾಥ ದಿಬ್ಬದ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಮತ್ತಿತರರಿದ್ದರು.

ವಿಜಯವಾಣಿ ಮಂಗಳವಾರ, ಡಿಸೆಂಬರ್ 11, 2018

# ಗ್ರಾಮ ಸ್ವರಾಜ್ಯದ ಕಲ್ಪನೆಗೆ ಹಿನ್ನಡೆ



ಗಾಂಧಿಭನದಲ್ಲಿ ಸೋಮವಾರ ಹಮ್ಮಿಕೊಂಡಿದ್ದ ಗಾಂಧೀಜಿ ಕುರಿತ ಸಂವಾದಕ್ಕೂ ಮುನ್ನ ನಾಡೋಜ ಪಾಟೀಲ ಪುಟ್ಟಪ್ಪ, ಎಂ.ವಿ. ರಾಜಶೇಖರನ್ ಹಾಗೂ ಇತರರು ಗಾಂಧಿ ಪ್ರತಿಮೆಗೆ ಪುಷ್ಪ ಸಮರ್ಪಿಸಿದರು.

**ಬೆಂಗಳೂರು:** ವಿದೇಶಿ ವಸ್ತುಗಳ ಮೇಲಿನ ವ್ಯಾಮೋಹ ಹೋಗುವವರೆಗೂ ಗಾಂಧೀಜಿ ಕಂಡಿರುವ ಗ್ರಾಮ ಸ್ವರಾಜ್ಯದ ಕನಸು ನನಸಾಗದು ಎಂದು ಹಿರಿಯ ಪತ್ರಕರ್ತ ಪಾಟೀಲ ಪುಟ್ಟಪ್ಪ ಅಭಿಪ್ರಾಯಪಟ್ಟರು.

ನಗರದ ಗಾಂಧಿಭವನದಲ್ಲಿ ಸೋಮವಾರ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಬಾಪು 150ನೇ ವರ್ಷಾಚರಣೆ ಅಂಗವಾಗಿ ಹಮ್ಮಿಕೊಂಡಿದ್ದ ಗಾಂಧೀಜಿ ಕುರಿತ ಮಕ್ಕಳೊಂದಿಗಿನ ಸಂವಾದದಲ್ಲಿ ಮಾತನಾಡಿದ ಅವರು, ಗಾಂಧೀಜಿ ಅವರ ಜೀವನ ಶೈಲಿ, ಸ್ವಾತಂತ್ರ್ಯ ಸಂಗ್ರಾಮ, ವಿದ್ಯಾಭ್ಯಾಸ, ಕರ್ನಾಟಕದೊಂದಿಗಿನ ನಂಟು, ಖಾದಿ ಬಟ್ಟೆಯ ಪ್ರೀತಿ, ದಕ್ಷಿಣ ಆಫ್ರಿಕಾದಲ್ಲಿನ ಹೋರಾಟ, ಅಸಹಕಾರ ಚಳುವಳಿ ಸೇರಿದಂತೆ ಮಕ್ಕಳು ಕೇಳಿದ ಹಲವು ಪ್ರಶ್ನೆಗಳಿಗೆ ಚುಟುಕಾಗಿ ಉತ್ತರಿಸಿದರು.

ಮಹಾತ್ಮ ಗಾಂಧೀಜಿ ಅವರು ಗ್ರಾಮ ಸ್ವರಾಜ್ಯದ ಬಗ್ಗೆ ಕನಸು ಕಂಡಿದ್ದರು. ಈ ಹಿನ್ನೆಲೆಯಲ್ಲಿ ವಿದೇಶಿ ವಸ್ತುಗಳನ್ನು ಬಹಿಷ್ಕರಿಸಿದ್ದರು. ಆದರೆ ಈಗ ಹಳ್ಳಿಗರಲ್ಲೂ ವಿದೇಶಿ ವಸ್ತುಗಳ ವ್ಯಾಮೋಹ ಶುರುವಾಗಿದೆ ಎಂದು ಕಳವಳ ವ್ಯಕ್ತ ಪಡಿಸಿದರು.

ನಗರ ಪ್ರದೇಶಗಳಲ್ಲಿ ವಿದೇಶಿ ವಸ್ತುಗಳ ವ್ಯಾಮೋಹ ವಿಪರೀತವಾಗಿದೆ. ಇದರ ಗಾಢ ಪ್ರಭಾವ ಹಳ್ಳಿಗರ ಮೇಲೂ ಬೀರಿದೆ. ಪಟ್ಟಣದ ಮಂದಿಯನ್ನೇ ಗ್ರಾಮೀಣರು ಅನುಕರಣೆ ಮಾಡಲು ಆರಂಭಿಸಿದ್ದಾರೆ. ಹೀಗಾಗಿಯೇ ಗಾಂಧೀಜಿ ಅವರ ಗ್ರಾಮ ಸ್ವರಾಜ್ಯದ ಕಲ್ಪಗೆ ಹಿನ್ನಡೆ ಉಂಟಾಗಿದೆ ಎಂದು ಬೇಸರ ವ್ಯಕ್ತಪಡಿಸಿದರು.

ಹತ್ತನೇ ವಯಸ್ಸಿನಲ್ಲಿರುವಾಗಲೇ ನಾನು ಗಾಂಧೀಜಿ ಅವರ ಚಿಂತನೆಗಳಿಗೆ ಮಾರುಹೋದೆ. ಕಾಲೇಜು ದಿನಗಳಲ್ಲಿ ಬ್ರಿಟಿಷರ ದಬ್ಬಾಳಿಕೆಯನ್ನು ಪ್ರತಿಭಟಿಸಿದೆ. ವಿದೇಶಿ ವಸ್ತುಗಳನ್ನು ಗಾಂಧೀಜಿ ಅವರು ಬಹಿಷ್ಕರಿಸಿ ಎಂದು ಜನತೆಗೆ ಕರೆ ನೀಡಿದಾಗ ನಾನು ಕೂಡ ಖಾದಿ ಬಟ್ಟೆಯನ್ನು ಧರಿಸ ತೊಡಗಿದೆ. ಖಾದಿ ಬಟ್ಟೆಗಾಗಿಯೇ ಪೋಷಕರ ಜತೆ ಜಗಳ ವಾಡುತ್ತಿದ್ದೆ ಎಂದರು.

ಕರ್ನಾಟಕ ಏಕೀಕರಣಕ್ಕಾಗಿ ಹೋರಾಟದ ದಿನಗನ್ನು ಬಿಚ್ಚಿಟ್ಟ ಪಾಟೀಲ ಪುಟ್ಟಪ್ಪ, ಕರ್ನಾಟಕದ ಕಲ್ಪನೆ ವಿಚಾರ ಸರ್ಕಾರಕ್ಕೆ ಇನ್ನೂ ಬಂದಿಲ್ಲ. ಇದು ಬಾರದಿದ್ದರೆ ರಾಜ್ಯ ಸಂಪೂರ್ಣ ಅಭಿವೃದ್ಧಿಯಾಗದು. ಅಖಂಡ ಕರ್ನಾಟಕ ಕಲ್ಪನೆಗಳಲ್ಲಿ ಸರ್ಕಾರ ಕಾರ್ಯಕ್ರಮಗಳನ್ನು ರೂಪಿಸಬೇಕು ಎಂದು ಹೇಳಿದರು.

ಕಾಂಗ್ರೆಸ್ ಪಕ್ಷದ ಹಿರಿಯ ಮುಖಂಡ ಎಂ.ವಿ. ರಾಜಶೇಖರನ್, ಕರ್ನಾಟ ವಿವಿಯ ನಿವೃತ್ತ ಕನ್ನಡ ಪ್ರಾಧ್ಯಾಪಕ ಪ್ರೊ.ಶಾಂತಿನಾಥ ದಿಬ್ಬದ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೊಡೆ ಪಿ.ಕೃಷ್ಣ ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಡಾ.ಲೋಹಿತ ನಾಯ್ಕ ಉಪಸ್ಥಿತರಿದ್ದರು.

ಕರ್ನಾಟಕ ಮಂಗಳವಾರ,11 ಡಿಸೆಂಬರ್ 2018,

# ಬೇಡಿಕೆ ಒಪ್ಪಿದರೆ ಬಸವಶ್ರೀ ಪ್ರಶಸ್ತಿ ಸ್ವೀಕಾರ: ಪಾಪು



ಬೆಂಗಳೂರಿನಲ್ಲಿ ಸೋಮವಾರ ಆಯೋಜಿಸಿದ್ದ 'ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು' ಸಂವಾದ ಕಾರ್ಯಕ್ರಮದಲ್ಲಿ ಗಾಂಧೀಜಿ ಪುತ್ಥಳಿಗೆ ಪತ್ರಕರ್ತ ಪಾಟೀಲ್ ಪುಟ್ಟಪ್ಪ, ಎಂ. ವಿ. ರಾಜಶೇಖರನ್ ಮತ್ತಿತರರು ಪುಷ್ಪನಮನ ಸಲ್ಲಿಸಿದರು.

**ವಿಕ ಸುದ್ದಿಲೋಕ** ಬೆಂಗಳೂರು

ಶಾಂತಿ ಮಾರ್ಗದಲ್ಲಿ ಜನರ ಮನ ಗೆಲ್ಲುವುದು ಸ್ವತಃ ಗಾಂಧೀಜಿಗೆ ಕಷ್ಟದ ಕೆಲಸವಾಗಿದ್ದರೂ ಶಾಂತಿ ಮೂಲಕ ಇಡೀ ವಿಶ್ವವನ್ನು ಗೆದ್ದು ಮಹಾತ್ಮ ಎನಿಸಿಕೊಂಡರು ಎಂದು ಹಿರಿಯ ಗಾಂಧೀವಾದಿ ಪಾಟೀಲ ಪುಟ್ಟಪ್ಪ ಅಭಿಪ್ರಾಯಪಟ್ಟರು.

ಕರ್ನಾಟಕಕ ಗಾಂಧಿ ಸ್ಮಾರಕ ನಿಧಿ ಬಾ ಬಾಪು 150ನೇ ವರ್ಷಾಚರಣೆ ಹಿನ್ನೆಲೆಯಲ್ಲಿ 'ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು' ಸಂವಾದ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಅವರು ಸೋಮವಾರ ಮಾತನಾಡಿ, ''ಮಾಜಿ ಸಿಎಂ ಎಸ್.ನಿಜಲಿಂಗಪ್ಪರನ್ನು ಏಕೀಕರಣ ಕರ್ನಾಟಕದ ಮೊದಲ ಸಿಎಂ ಎಂಬುದನ್ನು ಒಪ್ಪಿಕೊಳ್ಳಲು ಸರಕಾರ ಸಿದ್ಧವಿಲ್ಲ. ಇದಕ್ಕೆ ಮನ್ನಣೆ ಸಿಗುವವರೆಗೂ ನಾನು ಪ್ರಶಸ್ತಿ ಸ್ವೀಕರಿಸುವುದಿಲ್ಲ'' ಎಂದು ಪ್ರತಿಪಾದಿಸಿದರು.

ಗಾಂಧೀಜಿ ಸ್ವಾತಂತ್ರ್ಯಕ್ಕಾಗಿ ಶಾಂತಿ ಬದಲು ಕ್ರಾಂತಿಗೆ ಏಕೆ ಒತ್ತು ನೀಡಲಿಲ್ಲ ಎಂಬ ವಿದ್ಯಾರ್ಥಿನಿಯೊಬ್ಬಳ ಪ್ರಶ್ನೆಗೆ ಉತ್ತರಿಸಿದ ಪಾಪು ''ಶಾಂತಿ ಮಾರ್ಗದಲ್ಲಿ ಹೋರಾಟ ನಡೆಸುವುದು ಸುಲಭವಲ್ಲ. ಆದರೂ ಛಲ ಬಿಡದೆ ಶಾಂತಿ ಮಾರ್ಗದಲ್ಲೇ ಸ್ವಾತಂತ್ರ್ಯಕ್ಕೆ ಹೋರಾಡಿದರು. ಯಶಸ್ಸು ಗಳಿಸಿದರು,'' ಎಂದರು.

ಕರ್ನಾಟಕ ವಿವಿ ನಿವೃತ್ತ ಪ್ರಾಧ್ಯಾಪಕ ಪ್ರೊ.ಶಾಂತಿನಾಥ, ಕೇಂದ್ರದ ಮಾಜಿ ಸಚಿವ ಎಂ.ವಿ.ರಾಜಶೇಖರನ್, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ ಕೃಷ್ಣ, ಇಂದಿರಾ ಕೃಷ್ಣಪ್ಪ ಡಾ.ಲೋಹಿತ ನಾಯ್ಕ ಹಾಜರಿದ್ದರು.

# ಶಾಂತಿಯಿಂದ ಬ್ರಿಟಿಷರ ಮನಸ್ಸು ಗೆದ್ದವರು ಗಾಂಧಿ: ಪಾಪು ಬಣ್ಣನೆ

ವಿಶ್ವವಾಣಿ ಸುದ್ದಿಮನೆ ಬೆಂಗಳೂರು

ಸಮಾಜದಲ್ಲಿ ಶಾಂತಿಯ ಮೂಲಕ ಜನರನ್ನು ಗೆಲ್ಲುವುದು ಅತ್ಯಂತ ತ್ರಾಸದಾಯಕ ಕೆಲಸ. ಆದರೆ, ಮಹಾತ್ಮಗಾಂಧೀಜಿ ಕಷ್ಟದ ಕೆಲಸವನ್ನೇ ಆಯ್ದುಕೊಂಡರೂ ದೇಶದ ಜನರ ಹಾಗೂ ಬ್ರಿಟಿಷರ ಮನಸ್ಸು ಗೆದ್ದರು ಎಂದು ನಾಡೋಜ ಪಾಟೀಲ ಪುಟ್ಟಪ್ಪ ಅಭಿಪ್ರಾಯ ವ್ಯಕ್ತಪಡಿಸಿದರು.

ಗಾಂಧಿ ಭವನದಲ್ಲಿ ಆಯೋಜಿಸಿದ್ದ 'ಗಾಂಧೀ ಅಂಗಳದಲ್ಲಿ ಗಾಂಧೀ ಚಿಂತಕರು' ಎಂಬ ಸಂವಾದದಲ್ಲಿ ಮಾತನಾಡಿದ ಅವರು, ಗಾಂಧಿ ಅವರು ವಕೀಲ ವೃತ್ತಿಯ ಮೂಲಕ ಜನರಿಗೆ ನ್ಯಾಯ ದೊರಕಿಸಿ ಕೊಡಬಹುದಿತ್ತು, ಆದರೆ ಅವರು ಯಾವುದೇ ರೀತಿಯಲ್ಲಿ ಯಾರಿಗೂ ಮೋಸ ಮತ್ತು ನೋವಾಗದ ರೀತಿಯಲ್ಲಿ ಶಾಂತಿ ಮಾರ್ಗದ ಮೂಲಕವೇ ಸ್ವಾತಂತ್ರ್ಯ ಸಂಗ್ರಾಮವನ್ನು ನಡೆಸಿದ ಧೀಮಂತ ನಾಯಕ ಎಂದು ಬಣ್ಣಿಸಿದರು.

ಸ್ವದೇಶಿ ವಸ್ತುಗಳನ್ನು ಖರೀದಿ ಮಾಡಿ, ಅದನ್ನು ಬಳಸುವ ಮೂಲಕ ಗ್ರಾಮೀಣ ಜನರ ಬದುಕನ್ನು ಹಸನು ಮಾಡಲು ಸಾಧ್ಯ



ಗಾಂಧಿ ಭವನದಲ್ಲಿ ಆಯೋಜಿಸಿದ್ದ 'ಗಾಂಧೀ ಅಂಗಳದಲ್ಲಿ ಗಾಂಧೀ ಚಿಂತಕರು' ಎಂಬ ಸಂವಾದ ಕಾರ್ಯಕ್ರಮದಲ್ಲಿ ನಾಡೋಜ ಪಾಟೀಲ ಪುಟ್ಟಪ್ಪ ಬಾಪೂ ಪ್ರತಿಮೆಗೆ ಪುಷ್ಪ ನಮನ ಸಲ್ಲಿಸಿದರು.

ವಾಗುತ್ತದೆ. ಆದರೆ, ಇತ್ತೀಚಿನ ದಿನಗಳಲ್ಲಿ ವಿದೇಶಿ ವಸ್ತುಗಳ ಮೇಲೆ ವಿಪರೀತವಾದ ವ್ಯಾಮೋಹವನ್ನು ಬೆಳೆಸಿಕೊಳ್ಳಲಾಗುತ್ತಿದೆ. ಹೀಗಾಗಿ, ಎಲ್ಲಿಯವರೆಗೂ ವಿದೇಶಿ ವಸ್ತುಗಳ ಬಳಕೆ ನಿಲ್ಲಿಸಿ ಸ್ವದೇಶಿ ವಸ್ತುಗಳನ್ನು ಬಳಕೆ ಮಾಡುವುದಿಲ್ಲವೋ ಅಲ್ಲಿಯವರೆಗೂ ಬಡವ, ಶ್ರೀಮಂತರ ನಡುವಿನ ತಾರತಮ್ಯ ಕೊನೆಯಾಗಲ್ಲ ಎಂದರು. ಧಾರವಾಡ ವಿಶ್ವವಿದ್ಯಾಲಯದ ನಿವೃತ್ತ ಪ್ರಾಧ್ಯಾಪಕ ಪ್ರೊ.ಶಾಂತಿನಾಥ ದಿಬ್ಬದ ಮಾತನಾಡಿ, ಮಹಾತ್ಮಗಾಂಧೀಜಿಯ ಆದರ್ಶ ಇಡೀ ವಿಶ್ವಕ್ಕೆ ಮಾದರಿಯಾಗಿದೆ. ತಮ್ಮ ವೈಯುಕ್ತಿಕ ಸ್ವಾರ್ಥವನ್ನು ಬದಿಗಿಟ್ಟು ಇಡೀ ಜೀವನವನ್ನು ದೇಶಕ್ಕಾಗಿ ಅರ್ಪಿಸಿದ ವ್ಯಕ್ತಿಯಾಗಿದ್ದಾರೆ. ಅಂತಹ ಚೇತನದ ಬಗ್ಗೆ ಎಲ್ಲರೂ ಅರ್ಥ ಮಾಡಿಕೊಳ್ಳಬೇಕು ಹಾಗೂ ಅವರ ಮಾರ್ಗದಲ್ಲಿ ನಡೆಯಬೇಕು ಎಂದರು.

ಮೌಲ್ಯಗಳನ್ನು ಸಾಹಿತ್ಯಿಕವಾಗಿ ಬರೆಯುವುದು, ವೈಯುಕ್ತಿಕವಾಗಿ ಬದುಕಿನಲ್ಲಿ ಅನುಸರಿಸುವುದು ಹಾಗೂ ಸಾಮಾಜಿಕವಾಗಿ ಜಾರಿಗೆ ತರುವುದು ಗಾಂಧೀಯವರ ಚಿಂತನೆಯಾಗಿತ್ತು. ಇಂದಿನ ವಿದ್ಯಾರ್ಥಿ-ಯುವಜನರಲ್ಲಿ ರಾಷ್ಟ್ರದ, ರಾಷ್ಟ್ರ ನಾಯಕರ ಬಗ್ಗೆ ತಿಳಿವಳಿಕೆ ಇಲ್ಲದಾಗಿರುವುದು ದುರಂತ. ಹೀಗಾಗಿ, ಇಂದಿನ ಯುವಜನತೆ ಇತಿಹಾಸ ಮತ್ತು ಪರಂಪರೆಯನ್ನು ತಿಳಿದುಕೊಳ್ಳಬೇಕು ಎಂದು ಹೇಳಿದರು.

ಈ ಸಂದರ್ಭದಲ್ಲಿ ಮಾಜಿ ಸಚಿವ ಹಾಗೂ ಗಾಂಧೀವಾದಿ ಎಂ.ವಿ.ರಾಜಶೇಖರನ್, ಉಪನ್ಯಾಸಕ ಡಾ.ಲೋಹಿತ ನಾಯ್ಕ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

ಈ ಸಂಜೆ

ಸೋಮವಾರ, 10-12-2018



ಗಾಂಧಿ ಸ್ಮಾರಕ ನಿಧಿಯಿಂದ ಮಹಾತ್ಮಗಾಂಧೀಜಿ ಅವರ 150ನೇ ವರ್ಷಾಚರಣೆ ಅಂಗವಾಗಿ ಗಾಂಧಿಭವನದಲ್ಲಿ ಹಮ್ಮಿಕೊಂಡಿದ್ದ ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು ಕಾರ್ಯಕ್ರಮವನ್ನು ನಾಡೋಜ ಪಾಟೀಲ ಪುಟ್ಟಪ್ಪ ಉದ್ಘಾಟಿಸಿದರು. ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ ಪಿ ಕೃಷ್ಣ, ಕಾರ್ಯದರ್ಶಿ ಇಂದಿರಾ ಕೃಷ್ಣ, ಕೇಂದ್ರದ ಮಾಜಿ ಸಚಿವ ಎಂ.ವಿ.ರಾಜಶೇಖರನ್ ಮತ್ತಿತರರು ಪಾಲ್ಗೊಂಡಿದ್ದರು.

# ಸ್ವದೇಶಿ ವಸ್ತು ಬಳಸುವ ಮೂಲಕ ದೇಶ ಕಟ್ಟಲು ಕರೆ

ಬೆಂಗಳೂರು, ಡಿ.10- ಸ್ವದೇಶಿ ವಸ್ತುಗಳನ್ನು ಖರೀದಿಸಿ ಆ ಬಗ್ಗೆ ಪ್ರೀತಿ ಬೆಳೆಸಿಕೊಂಡಾಗ ಮಾತ್ರ ಗ್ರಾಮೀಣ ಜನರ ಬದುಕು ಹಸನಾಗಲಿದೆ ಎಂದು ಹಿರಿಯ ಸ್ವಾತಂತ್ರ್ಯ ಹೋರಾಟಗಾರ, ಪತ್ರಕರ್ತ, ನಾಡೋಜ ಪಾಟೀಲ್ ಪುಟ್ಟಪ್ಪ ಇಂದಿಲ್ಲಿ ಅಭಿಪ್ರಾಯಪಟ್ಟರು.

ಗಾಂಧಿಸ್ಮಾರಕ ನಿಧಿಯಿಂದ ಮಹಾತ್ಮಗಾಂಧೀಜಿ ಅವರ 150ನೇ ವರ್ಷಾಚರಣೆ ಅಂಗವಾಗಿ ಗಾಂಧಿಭವನದಲ್ಲಿ ಹಮ್ಮಿಕೊಂಡಿದ್ದ ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು ಕಾರ್ಯಕ್ರಮದ ವೇಳೆ ನಡೆದ ಸಂವಾದದಲ್ಲಿ ಪಾಲ್ಗೊಂಡು ಅವರು ಮಾತನಾಡಿದರು.

ಸ್ವದೇಶಿ ವಸ್ತುಗಳನ್ನು ಕೊಳ್ಳುವ ಮೂಲಕ ದೇಶ ಕಟ್ಟುವ ಕೆಲಸಕ್ಕೆ ಮುಂದಾಗಬೇಕು. ಎಲ್ಲಿಯವರೆಗೂ ವಿದೇಶಿ ವಸ್ತುಗಳ ವ್ಯಾಮೋಹ ಹೋಗುವುದಿಲ್ಲವೋ ಅಲ್ಲಿಯವರೆಗೂ ಬಡವ, ಶ್ರೀಮಂತರ ನಡುವಿನ ತಾರತಮ್ಯವೂ ಅಳಿಯುವುದಿಲ್ಲ. ಬಡವ ಶ್ರೀಮಂತ ಎಂಬ ತಾರತಮ್ಯವನ್ನು ಹೋಗಲಾಡಿಸಿ ಸಮಾನ ಸಮಾಜ ನಿರ್ಮಾಣ ಮಾಡಬೇಕು ಎಂಬುದೇ ಗಾಂಧೀಜಿಯವರ ಪರಿಕಲ್ಪನೆಯಾಗಿತ್ತು ಎಂದರು.

ಜಗತ್ತಿಗೆ ಮಹಾತ್ಮ ಗಾಂಧೀಜಿ ಅವರ ಆದರ್ಶ ಮಾದರಿಯಾಗಿದೆ. ರಾಷ್ಟ್ರದ ಸ್ವಾತಂತ್ರ್ಯದ ಬೆಳಕಿಗೆ ಮಹಾನ್ ಚೇತನವಾಗಿದ್ದ ಅವರ ಬದುಕು ದೊಡ್ಡ ಚರಿತ್ರೆ ಎಂದು ಧಾರವಾಡ ಕರ್ನಾಟಕ ವಿವಿಯ ನಿವೃತ್ತ ಕನ್ನಡ ಪ್ರಾಧ್ಯಾಪಕ ಪ್ರೊ. ಶಾಂತಿನಾಥ ದಿಬ್ಬದ ಅಭಿಪ್ರಾಯಪಟ್ಟರು.

ಗಾಂಧೀಜಿ ಅವರ ಆದರ್ಶಗಳನ್ನು ಇಂದಿನ ಯುವ ಸಮುದಾಯ ಅರಿಯುವಂತಾಗಲು ಗಾಂಧೀಜಿ ಸೇರಿದಂತೆ ರಾಷ್ಟ್ರದ ಇನ್ನಿತರ ಮಹಾನಾಯಕರಾದ ವಲ್ಲಭ ಭಾಯ್ ಪಟೇಲ್, ನೆಹರು ಅಂಥವರ ವಿಚಾರಗಳ ಅರಿವು ಮೂಡಿಸಬೇಕಿದೆ. ಬ್ರಿಟೀಷರ ವಿರುದ್ಧ ಅಹಿಂಸಾತ್ಮಕ ಹೋರಾಟದ ಮೂಲಕ ಸ್ವಾತಂತ್ರ್ಯ ತಂದುಕೊಟ್ಟ ಮಹಾನ್ ಚರಿತ್ರೆ ನಮ್ಮದು. ಆದರೆ, ಸ್ವಾತಂತ್ರ್ಯ ನಂತರ ದೇಶದಲ್ಲಿ ಹುಟ್ಟಿದ ಅನೇಕರಿಗೆ ಸ್ವಾತಂತ್ರ್ಯ ಕಾಲದ ಹೋರಾಟಗಾರರು ಪಟ್ಟ ಶ್ರಮ, ತ್ಯಾಗಗಳ ಅರಿವಿಲ್ಲ. ಅಂದು ಜೈಲಿಗೆ ಹೋಗಿದ್ದ, ಬೂಟು ಕಾಲಿನಿಂದ ಒದೆ ತಿಂದಿದ್ದವರ ಬದುಕಿನ ಮಹತ್ವ ತಿಳಿದಿಲ್ಲ ಎಂದು ಹೇಳಿದರು.

ವಿಭಿನ್ನ ಮನಸ್ಥಿತಿಯನ್ನು ಒಂದುಗೂಡಿಸುವ ವ್ಯಕ್ತಿತ್ವವನ್ನು ಆಫ್ರಿಕಾದಲ್ಲಿ ವಕೀಲರಾಗಿದ್ದ ಸಂದರ್ಭದಲ್ಲೇ ಮನನ ಮಾಡಿಕೊಂಡಿದ್ದ ಗಾಂಧೀಜಿಯವರು ಅದರಂತೆ ನಡೆದರು ಎಂದು ಪ್ರತಿಪಾದಿಸಿದರು.

ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ ಪಿ.ಕೃಷ್ಣ ಮಾತನಾಡಿ, ಗಾಂಧೀಜಿ ಅಹಿಂಸಾತ್ಮಕ ಸಮಾಜ ನಿರ್ಮಿಸುವ ಕನಸು ಹೊಂದಿದ್ದರು. ವಿಭಿನ್ನತೆಯಲ್ಲೇ ಏಕತೆ ಕಾಣಬೇಕು ಎಂಬ ಗಾಂಧೀಜಿಯವರ ಹಾದಿಯಲ್ಲೇ ಬದುಕು ರೂಪಿಸಿಕೊಳ್ಳೋಣ ಎಂದು ಕರೆ ನೀಡಿದರು.

ಕೇಂದ್ರದ ಮಾಜಿ ಸಚಿವ ಎಂ.ವಿ.ರಾಜಶೇಖರನ್, ಉಪನ್ಯಾಸಕ ಡಾ.ಲೋಹಿತ ನಾಯಕ, ಗಾಂಧಿ ಸ್ಮಾರಕ ನಿಧಿಯ ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

ಉದಯವಾಣಿ
ಸೋಮವಾರ, ಡಿಸೆಂಬರ್ 10, 2018

## ಇಂದಿನ ಆಮಂತ್ರಣ



■ ಕರ್ನಾಟಕ ಗಾಂಧಿ ಸ್ಮಾರಕ ನಿಧಿ: ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು. ಉದ್ಘಾಟನೆ: ಕರ್ನಾಟಕ ವಿವಿಯ ನಿವೃತ್ತ ಪ್ರಾಧ್ಯಾಪಕ ಪ್ರೊ. ಶಾಂತಿನಾಥ ದಿಬ್ಬದ. ಅತಿಥಿಗಳು: ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ ಪಿ.ಕೃಷ್ಣ, ನಾಡೋಜ ಡಾ.ಪಾಟೀಲ ಪುಟ್ಟಪ್ಪ. ಸ್ಥಳ: ಗಾಂಧಿ ಭವನ, ಬಾಪು ಸಭಾಂಗಣ. ಬೆಳಗ್ಗೆ 11.

ಸಂಯುಕ್ತ ಕರ್ನಾಟಕ
ಸೋಮವಾರ, 10, ಡಿಸೆಂಬರ್, 2018

## ಇಂದಿನ ಕಾರ್ಯಕ್ರಮ

ಬಸವನಗುಡಿ, ನಂ.6 ವಾಡಿಯಾ ರೋಡ್, ವಾಡಿಯಾ ಹಾಲ್, ದಿ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್ ವತಿಯಿಂದ ಉನ್ನತ ಶಿಕ್ಷಣದ ಸಮಸ್ಯೆಗಳು ಮತ್ತು ಅವಕಾಶಗಳು ವಿಷಯದ ಕುರಿತು ಚರ್ಚೆ, ಉಪನ್ಯಾಸ: ವೂಡೆ ಪಿ. ಕೃಷ್ಣ. ಸಂಜೆ 6.15

ಕನ್ನಡಪ್ರಭ

ಸ್ವಾತಂತ್ರ್ಯ ಸ್ಮರಣೆ ಪಾಕ್ – ಭಾರತ ಒಗ್ಗೂಡಿಸಲು ಶ್ರಮಿಸಿದ್ದ ಗಾಂಧಿ: ಸ್ವಾತಂತ್ರ್ಯ ಹೋರಾಟಗಾರ ಸ್ಮರಣೆ

# ದೇಶ ವಿಭಜನೆಗೆ ಗಾಂಧೀಜಿ ಕಾರಣರಲ್ಲ: ದೊರೆಸ್ವಾಮಿ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ದೇಶ ವಿಭಜನೆಗೆ ಮಹಾತ್ಮ ಗಾಂಧೀಜಿ ಕಾರಣ ಎಂಬುದು ಸತ್ಯಕ್ಕೆ ದೂರವಾದುದು ಎಂದು ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ ಹೇಳಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ನಗರದ ಗಾಂಧಿ ಭವನದಲ್ಲಿ 'ಬಾಪೂ 150' ವರ್ಷಾಚರಣೆ ಅಂಗವಾಗಿ ಶುಕ್ರವಾರ ಹಮ್ಮಿಕೊಂಡಿದ್ದ 'ಗಾಂಧೀ ಅಂಗಳದಲ್ಲಿ ಗಾಂಧೀ ಚಿಂತಕರು' ಕಾರ್ಯಕ್ರಮದಲ್ಲಿ ಮಾತನಾಡಿ, ಗಾಂಧಿ ಎಂದಿಗೂ ದೇಶ ವಿಭಜನೆ ಬಗ್ಗೆ ಚಿಂತಿಸಿದವರಲ್ಲ, ಪರಿಸ್ಥಿತಿ, ಒತ್ತಡಗಳು ವಿಭಜನೆಗೆ ಕಾರಣ. ಭಾರತ ಹಾಗೂ ಪಾಕಿಸ್ತಾನವನ್ನು ಒಗ್ಗೂಡಿಸಲು ಗಾಂಧಿ ಪ್ರಯತ್ನಿಸಿದರು. ಆದರೆ, ಅದು ಯಶಸ್ವಿಯಾಗಲಿಲ್ಲ ಎಂಬ ನೋವು ಅವರಿಗಿತ್ತು. ದೇಶ ವಿಭಜನೆಗೆ ಗಾಂಧಿ ಕಾರಣವೆಂಬ ಆರೋಪಗಳಲ್ಲಿ ಹುರುಳಿಲ್ಲ ಎಂದರು.

ಭಾರತ ಇಬ್ಭಾಗವಾಗದಂತೆ ಮೊಹಮ್ಮದ್ ಜಿನ್ನಾ ಅವರಲ್ಲಿ ಗಾಂಧಿ ಚರ್ಚಿಸಿದರು. ಜಿನ್ನಾ ಅವರಿಗೆ ಭಾರತದ ಪ್ರಧಾನ ಮಂತ್ರಿ ಅಥವಾ ರಾಷ್ಟ್ರಪತಿ ಹುದ್ದೆ ನೀಡಲು ಕಾಂಗ್ರೆಸ್ ಸಭೆಯಲ್ಲಿ ತಿಳಿಸಿದ್ದರು. ಆ ಸಂದರ್ಭದಲ್ಲಿ ಪಾಕಿಸ್ತಾನದಲ್ಲಿ ಹಿಂದೂ, ಸಿಖ್ಖರ ಮೇಲೆ ಹಿಂಸಾಚಾರ ಭುಗಿಲೆದ್ದಿತ್ತು. ಅಪಾರ ಆಸ್ತಿ ಹಾನಿಯಾಯಿತು. ಸರ್ದಾರ್ ವಲ್ಲಭಭಾಯಿ ಪಟೇಲ್, ನೆಹರು



ನಗರದ ಗಾಂಧಿ ಭವನದಲ್ಲಿ 'ಬಾಪೂ 150' ವರ್ಷಾಚರಣೆ ಅಂಗವಾಗಿ ನಡೆದ 'ಗಾಂಧೀ ಅಂಗಳದಲ್ಲಿ ಗಾಂಧೀ ಚಿಂತಕರು' ಕಾರ್ಯಕ್ರಮವನ್ನು ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ ಅವರು ಗಿಡಕ್ಕೆ ನೀರೆರೆಯುವ ಮೂಲಕ ಉದ್ಘಾಟಿಸಿದರು.

**ಗಾಂಧಿ ಹಾಗೂ ಅಂಬೇಡ್ಕರ್ ನಡುವೆ ತಾತ್ವಿಕ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿದ್ದವು. ಆದರೆ, ಪರಸ್ಪರ ಗೌರವ, ಪ್ರೀತಿ, ವಿಶ್ವಾಸವೂ ಇತ್ತು ಎಂಬುದನ್ನು ಮರೆಯಬಾರದು. ಕೆಲವರು ಗಾಂಧಿ ಅವರು ಅಂಬೇಡ್ಕರ್‌ಗೆ ಮೋಸ ಮಾಡಿದರು. ಅಂಬೇಡ್ಕರ್ ಅವರು ಗಾಂಧಿ ಅವರನ್ನು ದ್ವೇಷಿಸುತ್ತಿದ್ದರು. ಇವರಿಬ್ಬರಿಗೂ ಆಗುತ್ತಿರಲಿಲ್ಲ ಎಂದೆಲ್ಲ ಬಿಂಬಿಸುವುದನ್ನು ಮೊದಲು ಬಿಡಬೇಕು.**

• **ಎಚ್.ಎಸ್.ದೊರೆಸ್ವಾಮಿ** ಸ್ವಾತಂತ್ರ್ಯ ಹೋರಾಟಗಾರ.

ದೇಶದಲ್ಲಿ ಶಾಂತಿ ಸ್ಥಾಪಿಸಲು ಮುಂದಾದರು. ಅಂದು ಪಾಕಿಸ್ತಾನ ದೇಶ ಉದಯಿಸಲು ಅವಕಾಶ ನೀಡದಿದ್ದರೆ ಮತ್ತಷ್ಟು ಸಾವು ನೋವುಗಳನ್ನು ಅನುಭವಿಸಬೇಕಾಗಿತ್ತು ಎಂದರು.

ಸಾರ್ವಜನಿಕ ಜೀವನಕ್ಕೆ ಬರಬೇಕೆಂದು ನಿರ್ಧರಿಸಿದಾಗ ಸ್ವಯಂ ಪ್ರೇರಿತವಾಗಿ ಬಡತನವನ್ನು ಒಪ್ಪಿಕೊಂಡೆ. ಯಾರ ಹಂಗಿನಲ್ಲೂ ಇರಬಾರದೆಂದು ತೀರ್ಮಾನಿಸಿ ಪ್ರಕಾಶನ ಸಂಸ್ಥೆ ಸ್ಥಾಪಿಸಿದೆ. ನಂತರ ಪತ್ರಿಕಾ ಕಚೇರಿ ಪ್ರಾರಂಭಿಸಿದೆ. ನಾನು ಸಂಸಾರಿಯಾದ ಮೇಲೆ ಪುಸ್ತಕ ಪ್ರಕಟಣೆ ಮಾಡುತ್ತಿದ್ದೆ. ಪುಸ್ತಕ ಮಾರಾಟದಿಂದ ಬಂದ ಹಣದಿಂದ ಜೀವನ ನಡೆಸಿದೆ. ಸುಮಾರು 50 ವರ್ಷ ಪುಸ್ತಕದ ವ್ಯವಸಾಯದಿಂದಲೇ ಜೀವನ ನಿರ್ವಹಿಸಿದೆ. ಮಿತ ಸಂಪಾದನೆಯಲ್ಲೇ ನೆಮ್ಮದಿ ಜೀವನ ಕಟ್ಟಿಕೊಂಡೆ ಎಂದು ಹಳೆಯ ನೆನಪುಗಳನ್ನು ತೆರೆದಿಟ್ಟರು.

**'ರಾಜಕೀಯ ಪ್ರೇರಿತ ಗೂಂಡಾ ಸಂಘಟನೆ ಅಗತ್ಯವಿಲ್ಲ':** ಕಾಲೇಜುಗಳಲ್ಲಿ ನಮಗೆ ಕಲೆ, ಸಾಹಿತ್ಯ, ಸಂಸ್ಕೃತಿ ಪ್ರತಿಬಿಂಬಿಸುವ ವಿದ್ಯಾರ್ಥಿ ಸಂಘಟನೆಗಳು ಬೇಕು. ಆದರೆ, ರಾಜಕೀಯ ಪ್ರೇರಿತ ಗೂಂಡಾ ಸಂಘಟನೆಗಳ ಅಗತ್ಯವಿಲ್ಲ ಎಂದರು. ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ, ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಸಾಹಿತಿ ಬೇ.ಗೋ.ರಮೇಶ್, ಪರಿಸರವಾದಿ ನಾರಾಯಣ ರೆಡ್ಡಿ ಇದ್ದರು.

# ಕಲುಷಿತಗೊಳ್ಳುತ್ತಿವೆ ಮಲೆನಾಡಿನ ನದಿಗಳು

## । ಬಿ.ಎಲ್.ಶಂಕರ್ ಆತಂಕ । ನದಿಗಳನ್ನು ಉಳಿಸೋಣ ಬನ್ನಿ ಕಾರ್ಯಕ್ರಮ

ಬೆಂಗಳೂರು, ಡಿ.1: ಅಭಿವೃದ್ಧಿಯ ಹೆಸರಿನಲ್ಲಿ ನದಿಗಳು ಕಲುಷಿತಗೊಳ್ಳುತ್ತಿವೆ. ನದಿ ಮೂಲ ಗಳನ್ನು ಉಳಿಸಬೇಕಾಗಿದೆ. ಇಲ್ಲವಾದಲ್ಲಿ ಮಲೆನಾ ಡಿನ ನದಿಗಳು ಬಯಲುಸೀಮೆಯ ನದಿಗಳಂತೆ ಬತ್ತಲಿವೆ ಎಂದು ಕರ್ನಾಟಕ ಚಿತ್ರಕಲಾ ಪರಿಷತ್‌ನ ಅಧ್ಯಕ್ಷ ಬಿ.ಎಲ್.ಶಂಕರ್ ಆತಂಕ ವ್ಯಕ್ತಪಡಿಸಿದರು.

ಶನಿವಾರ ಗ್ರಾಮ ಸೇವಾ ಸಂಘವು ನಗರದ ಗಾಂಧಿ ಭವನದಲ್ಲಿ ವಿಜ್ಞಾನಿ ಸಂತ ಜಿ.ಡಿ.ಅಗರವಾಲರ ಸ್ಮರಣಾರ್ಥ ಆಯೋಜಿಸಿದ್ದ ನದಿಗಳನ್ನು ಉಳಿಸೋಣ ಬನ್ನಿ ಕಾರ್ಯಕ್ರಮದಲ್ಲಿ ಭಾಗವಹಿಸಿ ಅವರು ಮಾತನಾಡಿದರು.

ಕೃಷಿಯಲ್ಲಿ ಬಳಕೆಯಾಗುವ ಕ್ರಿಮಿನಾಶಕ ಇಂದು ಮಲೆನಾಡಿಗೆ ಮಾರಕವಾಗಿದೆ. ಮಲೆನಾಡಿನ ಕಾಡುಗಳಲ್ಲಿ ಸ್ಥಳೀಯ ಮರಗಳನ್ನು ಮೂಲೆ ಗುಂಪು ಮಾಡಿ ಕೇವಲ ಲಾಭದಾಯಕ ಮರಗಳನ್ನು ಬೆಳೆಸಿ ಕಾಡನ್ನು ಹಾಳು ಮಾಡುವ ಕೆಲಸವನ್ನು ಅರಣ್ಯ ಇಲಾಖೆಯೇ ಮಾಡುತ್ತಿದೆ ಎಂದು ಬೇಸರ ವ್ಯಕ್ತಪಡಿಸಿದ ಅವರು, ಧರ್ಮ ಗುರುಗಳು ಪರಿಸರ ಸಂರಕ್ಷಣೆಗೆ ಮುಂಚೂಣಿಯಲ್ಲಿ ನಿಲ್ಲಬೇಕು ಎಂದರು.



ಗ್ರಾಮ ಸೇವಾ ಸಂಘ ಬೆಂಗಳೂರಿನ ಗಾಂಧಿ ಭವನದಲ್ಲಿ ಶನಿವಾರ ಆಯೋಜಿಸಿದ್ದ ನದಿ ಉಳಿಸಿ ಅಭಿಯಾನದಲ್ಲಿ ಸಂಸದ ರಾಜೀವ್ ಗೌಡ, ಬಿ.ಎಲ್. ಶಂಕರ್, ಸಾಣೇಹಳ್ಳಿ ಮಠದ ಡಾ. ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿ ಮೊದಲಾದವರು ಪಾಲ್ಗೊಂಡರು.

ರಾಜ್ಯಸಭಾ ಸದಸ್ಯ ಪ್ರೊ. ಎಂ.ವಿ.ರಾಜೀವ್ ಗೌಡ ಮಾತನಾಡಿ, ಕಾವೇರಿ ಉಗಮ ಸ್ಥಾನದಲ್ಲೇ ಅಭಿವೃದ್ಧಿ ಹೆಸರಿನಲ್ಲಿ ರೈಲು ಹಳಿಗಳನ್ನು ನಿರ್ಮಾಣ ಮಾಡುವ ಕೆಲಸಕ್ಕೆ ಕೈ ಹಾಕಿ ಕಾಡನ್ನು ನಾಶ ಮಾಡುತ್ತಿದ್ದೇವೆ. ಬೆಳ್ಳಂದೂರು ಕೆರೆಯಲ್ಲಿ ಬೆಂಕಿ ನೋಡುತ್ತಿದ್ದೇವೆ ಹಾಗೂ ವೃಷಭಾವತಿಯಲ್ಲಿರುವ ರಾಸಾಯನಿಕಗಳು ಭಯ ಹುಟ್ಟಿಸುತ್ತದೆ. ಆ ನೀರಿನಲ್ಲಿ ಬೆಳೆಯುವ ತರಕಾರಿಯನ್ನು ಬೆಳೆದು ತಿನ್ನುತ್ತಿದ್ದೇವೆ. ಈ ದುಷ್ಪರಿಣಾಮಗಳ ಬಗ್ಗೆ ಎಲ್ಲರು ಜಾಣ ಕುರುಡರಂತೆ ವರ್ತಿಸುತ್ತಿದ್ದೇವೆಂದು ಅವರು ವಿಷಾದಿಸಿದರು.

ಸಾಣೇಹಳ್ಳಿಯ ಪಂಡಿತಾರಾಧ್ಯ ಸ್ವಾಮೀಜಿ ಮಾತನಾಡಿ, ಸರಳ ಜೀವನ ಮತ್ತು ಉನ್ನತ ಚಿಂತನೆ ಪರಿಸರವನ್ನು ಉಳಿಸುತ್ತದೆ. ಹಿರಿಯರು ಪ್ರಕೃತಿಯನ್ನು ದೇವರಂತೆ ನೋಡುತ್ತಿದ್ದರು, ಇಂದು ಅದು ಸಂಪತ್ತಾಗಿದೆ. ಇವತ್ತು ವಿಜ್ಞಾನಕ್ಕೂ ಧರ್ಮಕ್ಕೂ ಸಂಬಂಧ ಕಳಚಿಕೊಂಡಿದೆ. ಆದರೆ, ಇವು ಒಂದೇ ನಾಣ್ಯದ ಎರಡು ಮುಖಗಳು. ವಿಜ್ಞಾನ ಹಾಗೂ ಧರ್ಮ ಒಂದಾದರೆ ಸಮಾಜದಲ್ಲಿ ಬದಲಾವಣೆ ತರಬಹುದು ಎಂದು ಅಭಿಪ್ರಾಯಿಸಿದರು. ಕಾರ್ಯಕ್ರಮದಲ್ಲಿ ಹಿರಿಯ ರಂಗಕರ್ಮಿ ಪ್ರಸನ್ನ ಪ್ರಸ್ತಾವಿಕವಾಗಿ ಮಾತನಾಡಿದರು.

ರಾಷ್ಟ್ರೀಯ ಸ್ವಾಭಿಮಾನ ಆಂದೋಲನದ ಬಸವರಾಜ್ ಪಾಟೀಲ್, ನೀರಿನ ತಜ್ಞ ವಿಶ್ವನಾಥ, ಲೋಕವಿದ್ಯಾ ಕಾರ್ಯಕರ್ತ ಅಭಿಜಿತ್ ಮಿತ್ರ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಡಾ ವೂಡೇ ಪಿ. ಕೃಷ್ಣ, ಪರಿಸರ ತಜ್ಞ ಸಿ. ಯತಿರಾಜು ಮತ್ತಿತರರಿದ್ದರು.

> ಅಕ್ರಮ ಮರಳು ಗಣಗಾರಿಕೆ ಪರಿಸರಕ್ಕೆ ಮಾರಕವಾಗಿದ್ದು ಅದು ಮೊದಲು ನಿಲ್ಲಬೇಕಾಗಿದೆ. ಮರಳು ಗಣಗಾರಿಕೆಯಿಂದಾಗಿ ನದಿ ಮೂಲಗಳು ನಾಶವಾಗುತ್ತಿವೆ.
>
> । ಪ್ರೊ. ಎಂ.ವಿ.ರಾಜೀವ್ ಗೌಡ, ರಾಜ್ಯಸಭಾ ಸದಸ್ಯ

## ನದಿ ಉಳಿಸೋಣ ಬನ್ನಿ ಕಾರ್ಯಕ್ರಮ ಉದ್ಘಾಟಿಸಿದ ಪಂಡಿತಾರಾಧ್ಯ ಸ್ವಾಮೀಜಿ ಆಗ್ರಹ

# ಹದಿನೇಳು ಮಲಿನ ನದಿಗಳನ್ನು ಶುದ್ಧೀಕರಿಸಿ

■ ವಿಕ ಸುದ್ದಿಲೋಕ ಬೆಂಗಳೂರು

ರಾಜ್ಯದಲ್ಲಿ ಮಲಿನಗೊಂಡಿರುವ 17 ನದಿಗಳನ್ನು ಶುಚಿಗೊಳಿಸುವ ಕಾರ್ಯವನ್ನು ಸರಕಾರ ಕೂಡಲೇ ಕೈಗೆತ್ತಿಕೊಳ್ಳಬೇಕು ಎಂದು ಸಾಣೇಹಳ್ಳಿ ಮಠದ ಡಾ.ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮೀಜಿ ಆಗ್ರಹಿಸಿದರು.

ಗಾಂಧಿ ಭವನದ ಕಸ್ತೂರಬಾ ಸಭಾಂಗಣದಲ್ಲಿ 'ವಿಜ್ಞಾನಿ ಸಂತ ಜಿ.ಡಿ.ಅಗರವಾಲ ಅವರ ಸ್ಮರಣಾರ್ಥ' ಗ್ರಾಮ ಸೇವಾ ಸಂಘ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಲೋಕವಿದ್ಯಾ ವೇದಿಕೆ ಹಾಗೂ ಭಾರತ ಯಾತ್ರಾ ಕೇಂದ್ರ ಜಂಟಿಯಾಗಿ ಶನಿವಾರ ಆಯೋಜಿಸಿದ್ದ 'ನದಿಗಳನ್ನು ಉಳಿಸೋಣ ಬನ್ನಿ' ಕಾರ್ಯಕ್ರಮ ಉದ್ಘಾಟಿಸಿ ಅವರು ಮಾತನಾಡಿದರು.

''ರಾಜ್ಯದಲ್ಲಿ 17 ಪ್ರಮುಖ ನದಿಗಳು ಮಲಿನಗೊಂಡಿವೆ ಎಂದು ಸರಕಾರ ಗುರುತಿಸಿದ್ದು, ಅವುಗಳನ್ನು ಶುಚಿಗೊಳಿಸುವುದಾಗಿ ಘೋಷಿಸಿದೆ. ಆದ್ದರಿಂದ ಈ ಕಾರ್ಯವನ್ನು ಸರಕಾರ ಶೀಘ್ರ ಅನುಷ್ಠಾನಗೊಳಿಸಬೇಕು,'' ಎಂದು ಒತ್ತಾಯಿಸಿದರು.

''ಧರ್ಮ ಮತ್ತು ವಿಜ್ಞಾನ ಒಂದೇ ನಾಣ್ಯದ ಎರಡು ಮುಖಗಳು. ಮುಖ ಸರಿಯಿಲ್ಲದೇ ಇದ್ದರೆ, ನಾಣ್ಯಕ್ಕೆ ಬೆಲೆ ಇರುವುದಿಲ್ಲ. ವಿಜ್ಞಾನ ಮತ್ತು ಧರ್ಮಗಳು ಒಂದಾದಾಗ ಮಾತ್ರ ಸಮಾಜದಲ್ಲಿ ಪರಿವರ್ತನೆ ಸಾಧ್ಯ. ಆದರೆ, ಧರ್ಮಗಳು ವೈಜ್ಞಾನಿಕತೆಯನ್ನು ಅಳವಡಿಸಿಕೊಳ್ಳದೆ ಆಚಾರ, ವಿಚಾರಗಳ ಹೆಸರಲ್ಲಿ ನದಿಗಳನ್ನು ಮಾಲಿನ್ಯ ಮಾಡುತ್ತಿವೆ. ನಮ್ಮ ನಾಗರೀಕತೆ ಮತ್ತು ಸಂಸ್ಕೃತಿಗಳು ನದಿ ದಡದಲ್ಲಿ ಬೆಳೆದು ಬಂದಿವೆ. ಇಂದು ನಾಗರೀಕತೆ ಮತ್ತು ಧಾರ್ಮಿಕ ಪರಂಪರೆಗಳೇ ನದಿ ಮೂಲಗಳ ನಾಶಕ್ಕೆ ಕಾರಣವಾಗುತ್ತಿವೆ. ಈ ಯಾವುದೇ ಘಟನೆಗಳ ಬಗ್ಗೆ ಪರಿವೆಯೇ ಇಲ್ಲದೆ ಧಾರ್ಮಿಕ ವ್ಯಕ್ತಿಗಳು ವೈಚಾರಿಕತೆ ಮತ್ತು ವೈಜ್ಞಾನಿಕತೆಗೆ ಬೆನ್ನು ತಿರುಗಿಸಿ ಕುಳಿತಿದ್ದಾರೆ,'' ಎಂದು ಬೇಸರ ವ್ಯಕ್ತಪಡಿಸಿದರು.

''ಕಾರ್ಖಾನೆ, ನಗರಗಳ ತ್ಯಾಜ್ಯ ನೀರು, ರೈತರು ಬಳಸುವ ರಾಸಾಯನಿಕ ಗೊಬ್ಬರ, ಕ್ರಿಮಿನಾಶಕ ಇತ್ಯಾದಿಗಳು ಎಗ್ಗಿಲ್ಲದೆ ನದಿಗಳಿಗೆ ಹರಿಸುತ್ತಿದ್ದೇವೆ. ನದಿಗಳು ಉಳಿಯದಿದ್ದರೆ ನಾಗರೀಕತೆ ಸರ್ವನಾಶವಾಗಲಿದೆ,'' ಎಂದು ಅಭಿಪ್ರಾಯಪಟ್ಟರು.

ಪ್ರೊ.ಜಿ.ಡಿ.ಅಗರವಾಲ ಅವರ ಸಮೀಪವರ್ತಿ ಬಸವರಾಜ ಪಾಟೀಲ ಮಾತನಾಡಿ, ''ಗಂಗಾ ನದಿ ಶುಚಿಗೊಳಿಸುವಂತೆ ಆಗ್ರಹಿಸಿ 111 ದಿನಗಳ ಕಾಲ ಉಪವಾಸ ಸತ್ಯಾಗ್ರಹ ನಡೆಸಿ ಜಿ.ಡಿ.ಅಗರವಾಲ ಅವರು ಪ್ರಾಣಬಿಟ್ಟರು. ಗಂಗಾ ನದಿ ಶುದ್ಧೀಕರಣಕ್ಕೆ ಸಂಬಂಧಿಸಿದಂತೆ ಕಳೆದ ನಾಲ್ಕು ವರ್ಷಗಳಿಂದ ಕೇಂದ್ರ ಸರಕಾರ 22 ಸಾವಿರ ಕೋಟಿ ರೂ. ಖರ್ಚು ಮಾಡಿರುವುದಾಗಿ ಹೇಳುತ್ತಿದೆ. ಇದುವರೆಗೆ ಒಂದೇ ಒಂದು ಕೆಲಸವೂ ಆಗಿಲ್ಲ. ಈ ಹಣ ಎಲ್ಲಿ ಹೋಯಿತು ಎಂಬುದು ಸಹ ಗೊತ್ತಿಲ್ಲ. ಇಂತಹ ಸಂವೇದನಾರಹಿತ ಸರಕಾರಕ್ಕೆ ತಮ್ಮ ಬಲಿದಾನ ಅಗತ್ಯವಿಲ್ಲ. ಉಪವಾಸ ಬಿಟ್ಟು ಬೇರೆ ಹೋರಾಟದ ಮಾರ್ಗಗಳನ್ನು ಯೋಚಿಸೋಣ ಎಂದು ಅಗರವಾಲ ಅವರಿಗೆ ತಿಳಿಸಿದೆ. ಆದರೆ, ಅವರು ಹಠವಾದಿ. ಅವರ ಸಾವಿನ ಬಗ್ಗೆ ಸಹ ಕೇಂದ್ರ ಸರಕಾರ ಮರುಗಲಿಲ್ಲ,'' ಎಂದು ಅಸಮಾಧಾನ ವ್ಯಕ್ತಪಡಿಸಿದರು.

''ಕೇಂದ್ರದ ಜಲಸಂಪನ್ಮೂಲ ಮಂತ್ರಾಲಯದಲ್ಲಿ ಪ್ರಮುಖ ಹುದ್ದೆಗಳಲ್ಲಿರುವ ಆರು ಮಂದಿ ಐಎಎಸ್ ಅಧಿಕಾರಿಗಳು ಅಗರವಾಲ ಅವರ ವಿದ್ಯಾರ್ಥಿಗಳಾಗಿದ್ದಾರೆ. ಒಂದು ನದಿ ಶುದ್ಧೀಕರಣದ ವಿಷಯಕ್ಕೆ ಸಂಬಂಧಿಸಿದಂತೆ ಈ ದೇಶ ಒಬ್ಬ ಮಹಾನ್ ವಿಜ್ಞಾನಿಯ ಬಲಿ ಪಡೆಯುತ್ತದೆ ಎಂದರೆ ನಾವು ಯಾವ ಯುಗದಲ್ಲಿದ್ದೇವೆ ಎಂಬುದನ್ನು ಗಂಭೀರವಾಗಿ ಚಿಂತನೆ ನಡೆಸಬೇಕು. ಮುಂಬರುವ ದಿನಗಳಲ್ಲಿ ದೇಶಾದ್ಯಂತ ನದಿಗಳನ್ನು ರಕ್ಷಿಸುವಂತಹ ಹೋರಾಟಗಳನ್ನು ಮತ್ತಷ್ಟು ತೀವ್ರಗೊಳಿಸಲಾಗುವುದು,'' ಎಂದ ಅವರು ಹೇಳಿದರು.

ಸಮಾರಂಭದಲ್ಲಿ ರಾಜ್ಯಸಭಾ ಸದಸ್ಯ ಡಾ.ಎಂ.ವಿ.ರಾಜೀವ್‌ಗೌಡ, ವಿಧಾನ ಪರಿಷತ್ ಮಾಜಿ ಅಧ್ಯಕ್ಷ ಬಿ.ಎಲ್.ಶಂಕರ್, ರಂಗಕರ್ಮಿ ಹಾಗೂ ಹೋರಾಟಗಾರ ಪ್ರಸನ್ನ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೊಡೇ ಪಿ.ಕೃಷ್ಣ, ಜಲತಜ್ಞ ವಿಶ್ವನಾಥ್ ಶ್ರೀಕಂಠಯ್ಯ, ವಿಜ್ಞಾನಿ ಪ್ರೊ.ಅಭಿಜಿತ್ ಮಿತ್ರ ಮತ್ತಿತರರಿದ್ದರು.




ಬೆಂಗಳೂರಿನಲ್ಲಿ ಸಂತ ಜಿ.ಡಿ.ಅಗರವಾಲ ಅವರ ಸ್ಮರಣಾರ್ಥ ಹಮ್ಮಿಕೊಂಡಿದ್ದ 'ನದಿಗಳನ್ನು ಉಳಿಸೋಣ ಬನ್ನಿ' ಕಾರ್ಯಕ್ರಮವನ್ನು ಸಾಣೇಹಳ್ಳಿ ಮಠದ ಡಾ.ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮೀಜಿ ಉದ್ಘಾಟಿಸಿದರು. ರಾಜ್ಯ ಸಭಾ ಸದಸ್ಯ ಪ್ರೊ.ಎಂ.ವಿ.ರಾಜೀವ್‌ಗೌಡ, ವಿಧಾನಪರಿಷತ್ ಮಾಜಿ ಸಭಾಪತಿ ಬಿ.ಎಲ್.ಶಂಕರ್, ರಂಗಕರ್ಮಿ ಪ್ರಸನ್ನ ಸೇರಿದಂತೆ ಹಲವರು ಉಪಸ್ಥಿತರಿದ್ದರು.

> ಗಂಗಾ ನದಿ ಶುದ್ಧಿಕರಣಕ್ಕೆ ಕೇಂದ್ರ ಸರಕಾರ 22 ಸಾವಿರ ಕೋಟಿ ರೂ. ಖರ್ಚು ಮಾಡಿರುವುದಾಗಿ ಹೇಳುತ್ತಿದೆ. ಇದುವರೆಗೆ ಒಂದೇ ಒಂದು ಕೆಲಸವೂ ಆಗಿಲ್ಲ.
>
> **-ಬಸವರಾಜ ಪಾಟೀಲ**
> (ಜಿ.ಡಿ.ಅಗರವಾಲ ಸಮೀಪವರ್ತಿ)

ಸಂಯುಕ್ತ ಕರ್ನಾಟಕ ಭಾನುವಾರ | 02 ಡಿಸೆಂಬರ್, 2018



ಗ್ರಾಮ ಸೇವಾ ಸಂಘ ಹಮ್ಮಿಕೊಂಡಿದ್ದ "ನದಿಗಳನ್ನು ಉಳಿಸೋಣ ಬನ್ನಿ!" ಕಾರ್ಯಕ್ರಮವನ್ನು ಸಸಿಗೆ ನೀರು ಎರೆಯುವ ಮೂಲಕ ಸಾಣೇಹಳ್ಳಿ ಮಠದ ಡಾ.ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮೀಜಿ, ಕಾಂಗ್ರೆಸ್ ವಕ್ತಾರ ಬಿ.ಎಲ್.ಶಂಕರ್ ಹಾಗೂ ರಂಗಕರ್ಮಿ ಪ್ರಸನ್ನ ಉದ್ಘಾಟಿಸಿದರು.

# ಗಂಗಾ ಶುದ್ಧೀಕರಣ ಕಾರ್ಯರೂಪಕ್ಕೆ ಬರಲಿ

ಸಂ.ಕ.ಸಮಾಚಾರ ಬೆಂಗಳೂರು

ಮನುಷ್ಯನ ಸ್ವಾರ್ಥ ಹಿತಸಕ್ತಿಗೆ ನಾಶವಾಗುತ್ತಿರುವ ಪ್ರಕೃತಿ ಸಂಪತ್ತನ್ನು ಉಳಿಸಿಕೊಳ್ಳಲು ಯುವಜನತೆ ಎಚ್ಚೆತ್ತುಕೊಳ್ಳಬೇಕೆಂದು ಸಾಣೇಹಳ್ಳಿ ಮಠದ ಡಾ.ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮೀಜಿ ಹೇಳಿದರು.

ಗ್ರಾಮ ಸೇವಾ ಸಂಘದ ವತಿಯಿಂದ ವಿಜ್ಞಾನಿ ಸಂತ ಜಿ.ಡಿ.ಅಗರವಾಲರ ಸ್ಮರಣಾರ್ಥ ಗಾಂಧಿಭವನದಲ್ಲಿ ಆಯೋಜಿಸಿದ್ದ "ನದಿಗಳನ್ನು ಉಳಿಸೋಣ ಬನ್ನಿ!" ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದ ಅವರು, ನಮ್ಮ ಪೂರ್ವಜರು ಸುತ್ತಮುತ್ತಲಿನ ಪರಿಸರ ಸಂಪತ್ತನ್ನು ದೇವರು ಎಂಬ ಪೂಜ್ಯನೀಯ ಭಾವನೆಯಿಂದ ಕಾಣುತ್ತಿದ್ದರು. ಇತ್ತೀಚೆಗೆ ಮನುಷ್ಯ ತನ್ನ ಅತಿಯಾದ ದುರಾಸೆಗಳಿಂದ ಪರಿಸರವನ್ನು ಹಾಳು ಮಾಡುತ್ತಿದ್ದಾನೆ. ಸರಳ ಜೀವನ ಮತ್ತು ಉನ್ನತ ಚಿಂತನೆಗಳ ಮೂಲಕ ಪರಿಸರ ಉಳಿಯುತ್ತದೆ. ಈ ಬಗ್ಗೆ ಯುವಜನತೆ ಎಚ್ಚೆತ್ತುಕೊಂಡರೆ ಮುಂದೆ ಎದುರಾಗಬಹುದಾದ ಪ್ರಮಾದಗಳನ್ನು ತಡೆಯಬಹುದು ಎಂದರು.

> "ಅಭಿವೃದ್ಧಿಯ ಹೆಸರಿನಲ್ಲಿ ನದಿಗಳು ಕಲುಷಿತಗೊಳ್ಳುತ್ತಿವೆ. ಲಾಭದಾಯಕ ಮರಗಳನ್ನು ಬೆಳೆಸಿ ಕಾಡನ್ನು ನಾಶ ಮಾಡುವಂತಹ ಕೆಲಸ ಅರಣ್ಯ ಇಲಾಖೆ ಮಾಡುತ್ತಿದೆ.
>
> -ಬಿ.ಎಲ್.ಶಂಕರ್, ಕಾಂಗ್ರೆಸ್ ವಕ್ತಾರ

ಮಾತೆ ಅಕ್ಕಮಹಾದೇವಿ, ಬಸವಣ್ಣ ಹಾಗೂ ಅಲ್ಲಮ ಪ್ರಭುಗಳಂತಹ ಶರಣರು ವಚನಗಳಲ್ಲಿ ಪರಿಸರ "ಸಂರಕ್ಷಣೆಯ ಜಾಗೃತಿ ಮೂಡಿಸಿದ್ದಾರೆ. ಆದರೆ, ಮನುಷ್ಯ ಸ್ವಾರ್ಥ ಮನೋಭಾವನೆಯಿಂದ, ಲಾಭಕ್ಕಾಗಿ ನೆಲ, ಜಲ, ಬೆಟ್ಟ-ಗುಡ್ಡವನ್ನು ಬಗೆಯುತ್ತಿದ್ದಾನೆ. 'ಗಂಗಾ ಸ್ನಾನ-ತುಂಗಾ ಪಾನ' ಎಂಬುದಕ್ಕೆ ಇಂದು ತದ್ವಿರುದ್ಧವೆಂಬಂತೆ ಗಂಗೆ ತ್ಯಾಜ್ಯ ವಿಸರ್ಜನೆಯಿಂದ ಕಾಯಿಲೆಯ ಗೂಡಾಗುತ್ತಿದೆ. ಈ ವಿಚಾರದಲ್ಲಿ ಸರ್ಕಾರ ಕಣ್ಣು ಒರೆಸುವ ತಂತ್ರ ಮಾಡದೇ ಗಂಗಾ ನದಿ ಶುದ್ಧೀಕರಣವನ್ನು ಕಾರ್ಯರೂಪಕ್ಕೆ ತರಬೇಕೆಂದು ಹೇಳಿದರು.

ರಂಗಕರ್ಮಿ ಪ್ರಸನ್ನ ಮಾತನಾಡಿ, ವಿಜ್ಞಾನ ಮತ್ತು ಪರಿಸರ ಪರಸ್ಪರ ಬೇರೆಯಲ್ಲ. ಪಶ್ಚಿಮ ಘಟ್ಟಗಳು ರಾಜ್ಯದ ನದಿಗಳಿಗೆ ತಾಯ್ತಿಯಿದ್ದಂತೆ. ಆದರೆ, ಅಂತರ್ಜಲ ಪೋಷಣೆ ಆಗುತ್ತಿಲ್ಲ. ಇದೇ ಕಾರಣಕ್ಕೆ ಬಯಲು ಸೀಮೆಯಲ್ಲಿ ನೀರಿನ ಅಭಾವ ಉಂಟಾಗುತ್ತಿದೆ. ರಾಜ್ಯ ಸರ್ಕಾರ ಘೋಷಿಸಿರುವ ನದಿಗಳ ಶುದ್ಧೀಕರಣ ಸಮಿತಿ ಹೆಸರಿಗೆ ಸೀಮಿತವಾಗಬಾರದು ಎಂದು ಹೇಳಿದರು. ಜಿ.ಡಿ.ಅಗರವಾಲರು ಗಂಗಾ ನದಿ ಶುದ್ಧೀಕರಣಕ್ಕೆ ಒತ್ತಾಯಿಸಿ ಕೇಂದ್ರ ಸರ್ಕಾರಕ್ಕೆ 3 ಪತ್ರಗಳನ್ನು ಬರೆದಿದ್ದಾರೆ. ಆದರೆ, ಕೇಂದ್ರ ಸರ್ಕಾರ ನಿರ್ಲಕ್ಷಿಸಿದೆ. ಇದಕ್ಕೆ ಉತ್ತರ ಭಾರತದ ಜನತೆ ಕೇಂದ್ರ ಸರ್ಕಾರದ ಮೇಲೆ ಬೇಸರವಿದೆ ಎಂದು ಹೇಳಿದರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೆ ಪಿ.ಕೃಷ್ಣ, ರಾಜ್ಯಸಭಾ ಸದಸ್ಯ ಪ್ರೊ. ಎಂ.ವಿ.ರಾಜೀವ್‌ಗೌಡ, ಪರಿಸರ ತಜ್ಞ ಸಿ.ಯತಿರಾಜ್, ಹೋರಾಟಗಾರ ಅಭಿಜಿತ್ ಮಿತ್ರ ಸೇರಿದಂತೆ ಮತ್ತಿತರರಿದ್ದರು.

ಉದಯವಾಣಿ
ಶನಿವಾರ, ಡಿಸೆಂಬರ್ 1, 2018

# ಕಾಲೇಜುಗಳಲ್ಲಿ ಯೂನಿಯನ್‌ಗಳು ಬೇಡ

ಬೆಂಗಳೂರು: ಶಿಕ್ಷಣ ಸಂಸ್ಥೆಗಳಲ್ಲಿ ಯೂನಿಯನ್ ವ್ಯವಸ್ಥೆ ತರಬಾರದು ಎಂದು ಸ್ವಾತಂತ್ರ್ಯ ಹೋರಾಟಗಾರ ಡಾ.ಎಚ್.ಎಸ್.ದೊರೆಸ್ವಾಮಿ ಅಭಿಪ್ರಾಯಪಟ್ಟಿದ್ದಾರೆ.

ಕರ್ನಾಟಕ ಗಾಂಧೀ ಸ್ಮಾರಕ ನಿಧಿಯಿಂದ ಶುಕ್ರವಾರ ಹಮ್ಮಿಕೊಂಡಿದ್ದ 'ಬಾಪೂ 150: ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು' ಸಂವಾದದಲ್ಲಿ ಮಾತನಾಡಿದ ಅವರು, ವಿದ್ಯಾರ್ಥಿ ಹಂತದಲ್ಲಿ ಒಂದು ಪಕ್ಷಕ್ಕೆ ಮತ್ತು ಸಿದ್ಧಾಂತಕ್ಕೆ ಸೀಮಿತಗೊಳ್ಳಬಾರದು. ಕಾಲೇಜುಗಳಲ್ಲಿ ಯೂನಿಯನ್‌ಗಳನ್ನು ಮಾಡಲು ಮುಂದಾಗಿರುವುದು ಸೂಕ್ತವಲ್ಲ, ಇದರಿಂದ ಶಿಕ್ಷಣ ಸಂಸ್ಥೆಗಳಲ್ಲಿ ರಾಜಕೀಯ ನುಸುಳುತ್ತದೆ ಎಂದು ಹೇಳಿದರು.

ಗಾಂಧೀಜಿ ಎಂದಿಗೂ ದೇಶ ವಿಭಜನೆಯ ಬಗ್ಗೆ ಯೋಚಿಸಿರಲಿಲ್ಲ, ಭಾರತ ಇಬ್ಭಾಗವಾಗದಂತೆ ಮೊಹಮ್ಮದ್ ಅಲಿ ಜಿನ್ನಾ ಅವರ ಜತೆ ಗಾಂಧೀಜಿ ಚರ್ಚಿಸಿದರು. ಆದರೆ ಆ ಸಂದರ್ಭದಲ್ಲಿ ಪಾಕಿಸ್ತಾನದ ನೆಲದಲ್ಲಿ ವಾಸವಿದ್ದ ಹಿಂದೂಗಳು ಮತ್ತು ಸಿಖ್ಖರು ಹಿಂಸೆ ತಡೆಯಲಾರದೆ ಭಾರತಕ್ಕೆ ಬಂದರು. ಹೀಗಾಗಿ, ಸರ್ದಾರ್ ವಲ್ಲಭಬಾಯಿ ಪಟೇಲ್ ಹಾಗೂ ಜವಾಹರಲಾಲ್ ನೆಹರು ಅವರು ದೇಶದಲ್ಲಿ ಶಾಂತಿ ಮೂಡಿಸುವ ಸಲುವಾಗಿ ಭಾರತವನ್ನು ವಿಭಜಿಸಲು ಮುಂದಾದರು. ಒಂದು ವೇಳೆ ಅಂದು ಪಾಕಿಸ್ತಾನ ದೇಶ ಉದಯಿಸಲು ಅವಕಾಶ ನೀಡದಿದ್ದರೆ ಮತ್ತಷ್ಟು ಸಾವು ನೋವು ಸಂಭವಿಸುತ್ತಿದ್ದವು ಎಂದು ತಿಳಿಸಿದರು.



ಕರ್ನಾಟಕ ಗಾಂಧೀ ಸ್ಮಾರಕ ನಿಧಿಯಿಂದ ಶುಕ್ರವಾರ ಹಮ್ಮಿಕೊಂಡಿದ್ದ 'ಬಾಪೂ 150: ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು' ಸಂವಾದದಲ್ಲಿ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್. ದೊರೆಸ್ವಾಮಿ, ವೂಡೇ ಪಿ.ಕೃಷ್ಣ, ಪರಿಸರವಾದಿ ನಾರಾಯಣ ರೆಡ್ಡಿ ಮತ್ತಿತರರು ಇದ್ದರು.

ಪ್ರಪಂಚದಲ್ಲಿ ಪರಿಪೂರ್ಣ ವ್ಯಕ್ತಿಗಳೆಂದು ಯಾರೂ ಇರುವುದಿಲ್ಲ, ಎಲ್ಲರಿಂದಲೂ ತಪ್ಪಾಗುತ್ತವೆ. ತಪ್ಪುಗಳನ್ನು ಒಪ್ಪಿಕೊಂಡು ತಿದ್ದಿಕೊಂಡು ಬದುಕುವವರು ನಿಜವಾದ ಮನುಷ್ಯರಾಗುತ್ತಾರೆ ಎಂದ ಅವರು, ತಾತ್ವಿಕ ವಿಚಾರದಲ್ಲಿ ಅಂಬೇಡ್ಕರ್ ಹಾಗೂ ಗಾಂಧೀಜಿ ಅವರಲ್ಲಿ ಭಿನ್ನಾಭಿಪ್ರಾಯಗಳಿದ್ದವು. ಆದರೆ ಅವರಿಬ್ಬರ ನಡುವೆ ಹಗೆತನ ಇರಲಿಲ್ಲ ಎಂದು ಹೇಳಿದರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ.ಕೃಷ್ಣ, ಪರಿಸರವಾದಿ ನಾರಾಯಣ ರೆಡ್ಡಿ ಮತ್ತಿತರರು ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ
ಶನಿವಾರ | 1 | ಡಿಸೆಂಬರ್ | 2018
ಕನ್ನಡವೇ ಸತ್ಯ ಕನ್ನಡವೇ ನಿತ್ಯ



ಗಾಂಧಿ ಭವನದಲ್ಲಿ ನಡೆದ 150ನೇ ವರ್ಷಾಚರಣೆ ಅಂಗವಾಗಿ 'ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು' ಕಾರ್ಯಕ್ರಮದಲ್ಲಿ ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ, ಹಿರಿಯ ಸಾಹಿತಿ ಡಾ.ಬೇ.ಗೋ ರಮೇಶ್, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ, ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಉಪಸ್ಥಿತರಿದ್ದರು.

# ಪಾಕಿಸ್ತಾನ ಆಗಲು ಗಾಂಧಿ ಕಾರಣರಲ್ಲ

- ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ
- ಗಾಂಧಿ ದೇಶ ವಿಭಜನೆಗೆ ಎಂದೂ ಚಿಂತಿಸಿಲ್ಲ
- ಬಡತನ ಇರುವುದರಿಂದ ನನಗೆ ರೋಗವಿಲ್ಲ

ಸಂ.ಕ ಸಮಾಚಾರ ಬೆಂಗಳೂರು ,

ಪಾಕಿಸ್ತಾನ ಆಗಲು ಕಾರಣ ಗಾಂಧೀಜಿಯವರು ಎಂಬ ಆರೋಪಗಳಿವೆ. ಆದರೆ, ಅದು ಸತ್ಯಕ್ಕೆ ದೂರ ಎಂದು ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್. ದೊರೆಸ್ವಾಮಿ ಹೇಳಿದರು.

ಗಾಂಧಿ ಭವನದಲ್ಲಿ ಆಯೋಜಿಸಿದ್ದ, ಬಾಬಾಪೂ 150ನೇ ವರ್ಷಾಚರಣೆ ಅಂಗವಾಗಿ 'ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು' ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿ, ಗಾಂಧಿ ಎಂದೂ ದೇಶ ವಿಭಜನೆಯ ಬಗ್ಗೆ ಚಿಂತಿಸಿದವರಲ್ಲ. ಪರಿಸ್ಥಿತಿಗಳ ಒತ್ತಡದಿಂದ ಹಾಗೂ ಕೆಲವೊಂದು ಅನಾಹುತಗಳಿಂದ ವಿಭಜನೆಗೆ ಕಾರಣವಾಯಿತು. ಗಾಂಧಿ ದೇಶ ವಿಭಜನೆ ಆಗಬಾರದೆಂದು ಮಹಾ ಪ್ರಯತ್ನ ಮಾಡಿದರು ಎಂದರು.

ಸಾರ್ವಜನಿಕ ಜೀವನಕ್ಕೆ ಬದುಕು ನಿರ್ಧಾರಿಸಿದಾಗ ಸ್ವಯಂ ಪ್ರೇರಿತವಾಗಿ ಬಡತನವನ್ನು ಒಪ್ಪಿಕೊಂಡೆ. ಯಾರ ಬಳಿಯೂ ಕೈ ಹೊಡ್ಡದೇ. ಯಾರ ಹಂಗಿನಲ್ಲೂ ಇರಬಾರದೆಂದು ತೀರ್ಮಾನಿಸಿ ಪುಸ್ತಕದ ಅಂಗಡಿ ತೆರೆದೆ. ನಂತರ ಪತ್ರಿಕೆಯನ್ನು ಪ್ರಾರಂಭಿಸಿದೆ. ಪುಸ್ತಕ ಮಾರಾಟದಿಂದ ಬಂದ ಹಣದಿಂದ ಜೀವನ ನಡೆಸಿದೆ. 50 ವರ್ಷ ಪುಸ್ತಕ ಪ್ರಕಟಣೆಯಲ್ಲಿ ಜೀವನ ಕಳೆದಿದ್ದೇನೆ ಎಂದು ನೆನೆದ ಅವರು, ಬಡತನ ಇರುವುದರಿಂದ ನನಗೆ ರೋಗವಿಲ್ಲ. ಶ್ರೀಮಂತಿಕೆ ಇದ್ದರೆ ರೋಗ ಬರುತ್ತಿತ್ತೇನೊ. ಎಂದು ಹೇಳಿದರು.

ಯಾರೊಬ್ಬ ಜನರೂ ಪರಿಪೂರ್ಣರಲ್ಲ. ತಪ್ಪುಗಳಾಗುವುದು .ಸಹಜ. ಆದರೆ, ತಪ್ಪುಗಳನ್ನು ತಿದ್ದಿಕೊಳ್ಳುವವನೇ ದೊಡ್ಡ ಮನುಷ್ಯ. ತಾತ್ವಿಕ ವಿಚಾರದಲ್ಲಿ ಗಾಂಧೀಜಿ ಹಾಗೂ ಅಂಬೇಡ್ಕರ್‌ಗೆ ಬೇರೆ ಬೇರೆ ಅಭಿಪ್ರಾಯಗಳಿತ್ತು. ಆದರೆ, ಪರಸ್ಪರ ಪ್ರೀತಿ, ವಿಶ್ವಾಸವೂ ಇತ್ತು. ಆದರೆ ಜನರು ಅದನ್ನು ಇಂದಿಗೂ ತಪ್ಪಾಗಿ ತಿಳಿದಿದ್ದಾರೆ. ಶಿಕ್ಷಕರು ವಿದ್ಯಾರ್ಥಿಗಳಿಗೆ ದೇಶದ, ಚರಿತ್ರೆ, ಹಿಂದಿನ ವೈಭವದ ಬಗ್ಗೆ ತಿಳಿಸಬೇಕು. ಕೇವಲ ಪಠ್ಯಕ್ಕೆ ಸೀಮಿತರಾಗಿರಬಾರದು. ಗಾಂಧೀಜಿಯವರ ಬಗ್ಗೆ ಬೆಳಕು ಚೆಲ್ಲುವ ಕಾರ್ಯಕ್ರಮಗಳನ್ನು ಮಾಡಬೇಕೆಂದರು.

ಹಿರಿಯ ಸಾಹಿತಿ ಡಾ.ಬೇ.ಗೋರಮೇಶ್ ಮಾತನಾಡಿ, ಇಂದು ಗಾಂಧಿಯನ್ನು ನೆನೆಸಿಕೊಳ್ಳುವುದಕ್ಕಿಂತ ಮರೆತಿರುವುದೇ ಹೆಚ್ಚು. ಶಾಲಾ-ಕಾಲೇಜುಗಳಲ್ಲಿ ಗಾಂಧಿ ಜಯಂತಿಯನ್ನು ಕಡ್ಡಾಯವಾಗಿ ಆಚರಿಸಬೇಕಾದುದ್ದರಿಂದ ಕಾರ್ಯಕ್ರಮವನ್ನು ಮಾಡುತ್ತಿದ್ದಾರೆ. ಇಂದು ದೇಶ, ರಾಜ್ಯ ವಿಶಾಲವಾಯಿತು. ಆದರೆ ಜನರ ಮನಸ್ಸು ವಿಶಾಲವಾಗಲಿಲ್ಲ ಎಂದು ತಿಳಿಸಿದರು. ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ, ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಸೇರಿದಂತೆ ಮತ್ತಿತರರಿದ್ದರು.

ಈ ಸಂಜೆ

30-11-2018



ಬಾ... ಬಾಪೂ 150ನೇ ವರ್ಷಾಚರಣೆ ಅಂಗವಾಗಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ವತಿಯಿಂದ ಗಾಂಧಿಭವನದಲ್ಲಿ ಹಮ್ಮಿಕೊಂಡಿದ್ದ ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು ಕುರಿತ ಸಂವಾದ ಕಾರ್ಯಕ್ರಮದಲ್ಲಿ ಸಂಸ್ಥೆ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್.ದೊರೆಸ್ವಾಮಿ, ಡಾ.ಬೇ.ಗೋ ರಮೇಶ್, ಇಂದಿರಾ ಕೃಷ್ಣಪ್ಪ ಮತ್ತಿತರರು ಪಾಲ್ಗೊಂಡಿದ್ದರು.

ವಾರ್ತಾ ಭಾರತಿ

Page No. 3 Dec 11, 2018
Powered by: erelego.com

# ಮದ್ಯಪಾನ ನಿಷೇಧಿಸಿದ ಮೊದಲ ರಾಜ ಟಿಪ್ಪು

## ‘ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು’ ಸಂವಾದ



ಬೆಂಗಳೂರು, ಡಿ.10: ದೇಶದಲ್ಲಿಯೇ ಮೊತ್ತ ಮೊದಲ ಬಾರಿಗೆ ಮದ್ಯಪಾನವನ್ನು ನಿಷೇಧ ಮಾಡಿದ ರಾಜ ಟಿಪ್ಪುಸುಲ್ತಾನ್ ಎಂದು ಹಿರಿಯ ಗಾಂಧಿವಾದಿ ನಾಡೋಜ ಪಾಟೀಲ ಪುಟ್ಟಪ್ಪ ಹೇಳಿದ್ದಾರೆ.

ಸೋಮವಾರ ನಗರದ ಗಾಂಧಿ ಭವನದಲ್ಲಿ ಆಯೋಜಿಸಿದ್ದ ‘ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು’ ಸಂವಾದದಲ್ಲಿ ಪಾಲ್ಗೊಂಡು ವಿದ್ಯಾರ್ಥಿಯೊಬ್ಬರು ಕೇಳಿದ ಪ್ರಶ್ನೆಗೆ ಉತ್ತರಿಸಿದ ಅವರು, ಮದ್ಯಪಾನದಿಂದ ಆರೋಗ್ಯದ ಮೇಲೆ ಅಪಾರವಾದ ದುಷ್ಪರಿಣಾಮ ಬೀರುತ್ತದೆ, ಇದರಿಂದಾಗಿ ಜೀವನವೇ ಕೆಡುತ್ತದೆ ಎಂಬ ಉದ್ದೇಶದಿಂದ ಮೊದಲ ಬಾರಿಗೆ ಮದ್ಯಪಾನಕ್ಕೆ ನಿಷೇಧ ಹೇರಿದ ವ್ಯಕ್ತಿ ಟಿಪ್ಪು ಸುಲ್ತಾನ್ ಎಂದು ತಿಳಿಸಿದರು.

ಮಹಾತ್ಮಗಾಂಧಿ ಚಿಂತನೆಯಲ್ಲಿ ಒಂದಾದ ಮದ್ಯಪಾನವನ್ನು ನಿಷೇಧ ಮಾಡಲು ಯಾರೂ ಮುಂದಾಗಿಲ್ಲ. ಆದರೆ, ಟಿಪ್ಪು ಅದನ್ನು ನಿಷೇಧಿಸಿದ. ಅಂತಹ ವ್ಯಕ್ತಿಯ ಜನ್ಮದಿನವನ್ನು ಆಚರಿಸಲು ಸರಕಾರ ಮುಂದಾದರೆ, ಅದನ್ನೂ ವಿರೋಧ ಮಾಡುವವರಿದ್ದಾರೆ. ವಿರೋಧಿಸುವವರ ಆಡಳಿತಾವಧಿಯಲ್ಲಿ ಮದ್ಯಪಾನದ ವಿರುದ್ಧ ಎಲ್ಲಿಯೂ ಧ್ವನಿ ಎತ್ತಲಿಲ್ಲ ಎಂದರು.

ಸಮಾಜದಲ್ಲಿ ಶಾಂತಿಯ ಮೂಲಕ ಜನರನ್ನು ಗೆಲ್ಲುವುದು ಅತ್ಯಂತ ತ್ರಾಸದಾಯಕ ಕೆಲಸ. ಆದರೆ, ಮಹಾತ್ಮಗಾಂಧೀಜಿ ಕಷ್ಟದ ಕೆಲಸವನ್ನೇ ಆಯ್ದುಕೊಂಡರು. ದೇಶದ ಜನರ ಹಾಗೂ ಬ್ರಿಟಿಷರ ಮನಸ್ಸು ಗೆದ್ದರು. ಶಾಂತಿ ಮಾರ್ಗದ ಮೂಲಕವೇ ಸ್ವಾತಂತ್ರ್ಯ ಸಂಗ್ರಾಮವನ್ನು ನಡೆಸಿದರು ಎಂದ ಅವರು ನುಡಿದರು.

**ಸ್ವದೇಶಿ ವಸ್ತುಗಳನ್ನು ಬಳಸಿ:** ಸ್ವದೇಶಿ ವಸ್ತುಗಳನ್ನು ಖರೀದಿ ಮಾಡಿ, ಅದನ್ನು ಬಳಸುವ ಮೂಲಕ ಗ್ರಾಮೀಣ ಜನರ ಬದುಕನ್ನು ಹಸನು ಮಾಡಲು ಸಾಧ್ಯವಾಗುತ್ತದೆ. ಆದರೆ, ಇತ್ತೀಚಿನ ದಿನಗಳಲ್ಲಿ ವಿದೇಶಿ ವಸ್ತುಗಳ ಮೇಲೆ ವಿಪರೀತವಾದ ವ್ಯಾಮೋಹವನ್ನು ಬೆಳೆಸಿಕೊಳ್ಳಲಾಗುತ್ತಿದೆ. ಹೀಗಾಗಿ, ಎಲ್ಲಿಯವರೆಗೂ ವಿದೇಶಿ ವಸ್ತುಗಳ ಬಳಕೆ ನಿಲ್ಲಿಸಿ

**ಪಾಟೀಲ ಪುಟ್ಟಪ್ಪ**

ಸ್ವದೇಶಿ ವಸ್ತುಗಳನ್ನು ಬಳಕೆ ಮಾಡುವುದಿಲ್ಲವೋ ಅಲ್ಲಿಯವರೆಗೂ ಬಡವ-ಶ್ರೀಮಂತರ ನಡುವಿನ ತಾರತಮ್ಯ ಕೊನೆಯಾಗುವುದಿಲ್ಲ ಎಂದು ನುಡಿದರು.

ಧಾರವಾಡ ವಿಶ್ವವಿದ್ಯಾಲಯದ ನಿವೃತ್ತ ಪ್ರಾಧ್ಯಾಪಕ ಪ್ರೊ.ಶಾಂತಿನಾಥ ದಿಬ್ಬದ ಮಾತನಾಡಿ, ಮಹಾತ್ಮಗಾಂಧೀಜಿಯ ಆದರ್ಶ ಇಡೀ ವಿಶ್ವಕ್ಕೆ ಮಾದರಿಯಾಗಿದೆ. ತಮ್ಮ ವೈಯಕ್ತಿಕ ಸ್ವಾರ್ಥವನ್ನು ಬದಿಗಿಟ್ಟು ಇಡೀ ಜೀವನವನ್ನು ದೇಶಕ್ಕಾಗಿ ಅರ್ಪಿಸಿದ ವ್ಯಕ್ತಿಯಾಗಿದ್ದಾರೆ. ಅಂತಹ ಚೇತನದ ಬಗ್ಗೆ ಎಲ್ಲರೂ ಅರ್ಥ ಮಾಡಿಕೊಳ್ಳಬೇಕು ಹಾಗೂ ಅವರ ಮಾರ್ಗದಲ್ಲಿ ನಡೆಯಬೇಕು ಎಂದು ಹೇಳಿದರು.

ಕಾರ್ಯಕ್ರಮದಲ್ಲಿ ಮಾಜಿ ಸಚಿವ ಹಾಗೂ ಗಾಂಧಿವಾದಿ ಎಂ.ಸಿ.ರಾಜಶೇಖರನ್, ಉಪನ್ಯಾಸಕ ಡಾ.ಲೋಹಿತ ನಾಯ್ಕ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ ಉಪಸ್ಥಿತರಿದ್ದರು.

ಕನ್ನಡಪ್ರಭ

ಮಂಗಳವಾರ 11.12.2018

# 'ಖಾದಿ ಬಟ್ಟೆ ಬಳಸಿ, ಗ್ರಾಮಗಳ ಉದ್ಧರಿಸಿ'

## ಜನತೆ ಖಾದಿ ಬಟ್ಟೆ ಮಾತ್ರ ಬಳಸುತ್ತೇವೆ ಎಂದು ಪ್ರತಿಜ್ಞೆ ಮಾಡಲಿ । ಇದರಿಂದ ಗುಡಿ ಕೈಗಾರಿಕೆಗಳ ಬೆಳವಣಿಗೆ ಸಾಧ್ಯ: ಪಾಪು

• ಕನ್ನಡಪ್ರಭ ವಾರ್ತೆ ಬೆಂಗಳೂರು

'ಖಾದಿ ಬಟ್ಟೆ ಮಾತ್ರ ಬಳಸುತ್ತೇವೆ ಎಂದು ಯುವ ಜನತೆ ಪ್ರತಿಜ್ಞೆ ಮಾಡಿದಲ್ಲಿ ದೇಶದ ಗ್ರಾಮಗಳು ಅಭಿವೃದ್ಧಿಯಾಗಲಿವೆ' ಎಂದು ಹಿರಿಯ ಪತ್ರಕರ್ತ ನಾಡೋಜ ಪಾಟೀಲ ಪುಟ್ಟಪ್ಪ ತಿಳಿಸಿದ್ದಾರೆ.

ಬಾಪು 150ನೇ ವರ್ಷಾಚರಣೆ ಅಂಗವಾಗಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ವತಿಯಿಂದ ನಗರದ ಗಾಂಧಿ ಭವನದಲ್ಲಿ ಸೋಮವಾರ ಹಮ್ಮಿಕೊಂಡಿದ್ದ 'ಗಾಂಧೀ ಅಂಗಳದಲ್ಲಿ ಗಾಂಧೀ ಚಿಂತಕರು' ವಿಷಯದ ಕುರಿತ ಸಂವಾದದಲ್ಲಿ ಅವರು ಮಾತನಾಡಿದರು. ಗಾಂಧೀಜಿ ಅವರು ಸ್ವಾತಂತ್ರ್ಯ ಹೋರಾಟಕ್ಕೆ ಬರುತ್ತಿದ್ದಂತೆ ಸ್ವದೇಶಿ ಚಳವಳಿ ಪ್ರಾರಂಭಿಸಿದ್ದರು. ಅದೇ ರೀತಿ ಕೊನೆಯವರೆಗೂ ಖಾದಿಯನ್ನೇ ಬಳಸುತ್ತಿದ್ದರು. ಆದ್ದರಿಂದ ಯುವ ಜನತೆ ಖಾದಿ ಬಟ್ಟೆಯನ್ನು ಮಾತ್ರ ಬಳಸಬೇಕು. ಆಗ ಗ್ರಾಮೀಣ ಭಾಗದ ಗುಡಿ ಕೈಗಾರಿಕೆಗಳು ಬೆಳೆಯಲಿದ್ದು, ಗ್ರಾಮೀಣ ಭಾಗದ ಅಭಿವೃದ್ಧಿಯಾಗಲು ಸಾಧ್ಯ ಎಂದರು ಹೇಳಿದರು.

ಸ್ವಾತಂತ್ರ್ಯ ನಂತರ ಭಾರತ ಮತ್ತು ಪಾಕಿಸ್ತಾನ ವಿಭಜನೆಯಾಯಿತು. ಅಂತಹ ಸಂದರ್ಭದಲ್ಲಿ ಗಾಂಧಿಜೀಯವರ ವಿರುದ್ಧ ಅಪಪ್ರಚಾರ ನಡೆಯುತ್ತಿತ್ತು. ಅದೇ ಕಾರಣದಿಂದ ಗೋಡ್ಸೆ ಗಾಂಧಿಯನ್ನು ಕೊಂದರು ಎಂದು ಮತ್ತೊಬ್ಬ ವಿದ್ಯಾರ್ಥಿನಿ ಕೇಳಿದ ಪ್ರಶ್ನೆಗೆ ಪಾಟೀಲ್ ಪುಟ್ಟಪ್ಪ ಉತ್ತರಿಸಿದರು.



ಬಾಪು 150ನೇ ವರ್ಷಾಚರಣೆ ಅಂಗವಾಗಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ವತಿಯಿಂದ ನಗರದ ಗಾಂಧಿ ಭವನದಲ್ಲಿ ಸೋಮವಾರ ಹಮ್ಮಿಕೊಂಡಿದ್ದ 'ಗಾಂಧೀ ಅಂಗಳದಲ್ಲಿ ಗಾಂಧೀ ಚಿಂತಕರು' ಎಂಬ ವಿಷಯದ ಕುರಿತ ಸಂವಾದದಲ್ಲಿ ಗಾಂಧೀ ಪ್ರತಿಮೆಗೆ ಹಿರಿಯ ಪತ್ರಕರ್ತ ನಾಡೋಜ ಪಾಟೀಲ ಪುಟ್ಟಪ್ಪ ಪುಷ್ಪನಮನ ಸಲ್ಲಿಸಿದರು.

> ಸಮಾಜದಲ್ಲಿ ಶಾಂತಿಯ ಮೂಲಕ ಜನರನ್ನು ಗೆಲ್ಲುವುದು ಅತ್ಯಂತ ಕಷ್ಟದ ಕೆಲಸ, ಅದೇ ಮಾರ್ಗವನ್ನು ಗಾಂಧೀಜಿ ಅನುಸರಿಸಿದ್ದರು. ಶಾಂತಿ ಮಾರ್ಗದ ಮೂಲಕವೇ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗಿಯಾಗಿದ್ದರು. ಅಲ್ಲದೆ, ದೇಶದಕ್ಕೆ ಸ್ವಾತಂತ್ರ್ಯ ತಂದುಕೊಡುವವರೆಗೂ ಶಾಂತಿಯುತ ಹೋರಾಟ ಮಾಡಿದ್ದರು.
>
> • ಪಾಟೀಲ ಪುಟ್ಟಪ್ಪ, ಹಿರಿಯ ಪತ್ರಕರ್ತ,

**ಟಿಪ್ಪು ಮದ್ಯ ನಿಷೇಧಿಸಿದ ಮೊದಲ ರಾಜ:** ದೇಶದಲ್ಲಿ ಮೊದಲಿಗೆ ಮದ್ಯ ಮಾರಾಟ ನಿಷೇಧಿಸಿದ್ದ ಕೀರ್ತಿ ಮೈಸೂರು ಸಂಸ್ಥಾನದ ಮಹಾರಾಜನಾಗಿದ್ದ ಟಿಪ್ಪು ಸುಲ್ತಾನ್ ಅವರಿಗೆ ಸಲ್ಲುತ್ತದೆ ಎಂದು ಇದೇ ವೇಳೆ ಪುಟ್ಟಪ್ಪ ಪ್ರತಿಪಾದಿಸಿದರು. ಮದ್ಯಪಾನವನ್ನು ಏಕೆ ನಿಷೇಧ ಮಾಡಬಾರದು ಎಂದು ವಿದ್ಯಾರ್ಥಿನಿಯೊಬ್ಬರು ಕೇಳಿದ ಪ್ರಶ್ನೆಗೆ ಉತ್ತರಿಸಿದ ಅವರು, ದೇಶದಲ್ಲಿ ಮೊದಲಿಗೆ ಮದ್ಯ ಮಾರಟ ನಿಷೇಧಿಸಿದ್ದ ಕೀರ್ತಿ ಮೈಸೂರು ಸಂಸ್ಥಾನದ ಮಹಾರಾಜನಾಗಿದ್ದ ಟಿಪ್ಪು ಸುಲ್ತಾನ್ ಅವರಿಗೆ ಸಲ್ಲುತ್ತದೆ. ಮದ್ಯಪಾನ ಮಾಡಿದಲ್ಲಿ ಕುಟುಂಬವೇ ಬೀದಿಗೆ ಬರುವುದರ ಜೊತೆಗೆ ಆರೋಗ್ಯಕ್ಕೆ ಹಾನಿಯಾಗುತ್ತದೆ. ಅದೇ ಕಾರಣಕ್ಕೆ ಗಾಂಧೀಜಿ ಅವರು ಮದ್ಯಪಾನದ ವಿರುದ್ಧ ಹೋರಾಡಿದ್ದರು. ಆದರೆ, ಗಾಂಧಿಜೀ ಅವರಿಗಿಂತಲೂ ಮುನ್ನ ಮೈಸೂರು ಸಂಸ್ಥಾನದಲ್ಲಿ ಟಿಪ್ಪು ಸುಲ್ತಾನ ಮದ್ಯವನ್ನು ನಿಷೇಧಿಸಿದ್ದರು. ಅಂತಹ ವ್ಯಕ್ತಿಯ ಜಯಂತಿಗೆ ವಿರೋಧ ವ್ಯಕ್ತಪಡಿಸುವುದು ಎಷ್ಟು ಸರಿ ಎಂದು ಪ್ರಶ್ನಿಸಿದರು.

ಧಾರವಾಡ ವಿವಿಯ ದ ನಿವೃತ್ತ ಪ್ರಾಧ್ಯಾಪಕ ಪ್ರೊ. ಶಾಂತಿನಾಥ ದಿಬ್ಬದ ಮಾತನಾಡಿ, ಮಹಾತ್ಮ ಗಾಂಧೀಜಿಯ ಆದರ್ಶ ಇಡೀ ವಿಶ್ವಕ್ಕೆ ಮಾದರಿಯಾಗಿದೆ. ತಮ್ಮ ವೈಯುಕ್ತಿಕ ಸ್ವಾರ್ಥವನ್ನು ಬದಿಗಿಟ್ಟು ಇಡೀ ಜೀವನವನ್ನು ದೇಶಕ್ಕಾಗಿ ಅರ್ಪಿಸಿದ ವ್ಯಕ್ತಿಯಾಗಿದ್ದಾರೆ. ಅಂತಹ ಚೇತನನ್ನು ಅರ್ಥೈಸಿಕೊಂಡು ಅವರ ಮಾರ್ಗದಲ್ಲಿ ಅನುಸರಿಸಬೇಕು ಎಂದರು. ದೇಶದಲ್ಲಿ ಸ್ವಾತಂತ್ರ್ಯದ ನಂತರದ ತಲೆಮಾರಿನವರಿಗೆ ಸ್ವಾತಂತ್ರ್ಯ ಹೋರಾಟದ ಬೆಲೆ ಗೊತ್ತಿಲ್ಲ, ಬ್ರಿಟಿಷರ ಹಿಂಸೆ, ಅವಮಾನ, ಚಳವಳಿಗಾರರು ಪಟ್ಟ ಕಷ್ಟಗಳು ಅರ್ಥವಾಗುತ್ತಿಲ್ಲ. ಅಂದು ಗಾಂಧೀ ಸೇರಿದಂತೆ ನೂರಾರು ಹೋರಾಟಗಾರರು ಸ್ವಾತಂತ್ರ್ಯ ಚಳವಳಿ ನಡೆಸದೇ ಇದ್ದಿದ್ದರೆ ಇಂದು ನಮ್ಮ ಸ್ಥಿತಿಯನ್ನು ಊಹಿಸಿಕೊಳ್ಳಲು ಅಸಾಧ್ಯ ಎಂದು ತಿಳಿಸಿದರು. ಕೇಂದ್ರ ಮಾಜಿ ಸಚಿವ ಎಂ.ವಿ.ರಾಜಶೇಖರನ್, ಉಪನ್ಯಾಸಕ ಡಾ. ಲೋಹಿತ ನಾಯ್ಕ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ.ಕೃಷ್ಣ ಉಪಸ್ಥಿತರಿದ್ದರು.

ಸಂಜೆವಾಣಿ ಶುಕ್ರವಾರ, 30 ನವೆಂಬರ್ 2018



ಬಾ ಬಾಪು 150ನೇ ವರ್ಷಾಚರಣೆ ಅಂಗವಾಗಿ ನಡೆದ 'ಗಾಂಧೀ ಅಂಗಳದಲ್ಲಿ ಗಾಂಧೀ ಚಿಂತಕರು' ಕಾರ್ಯಕ್ರಮದಲ್ಲಿ ಕೆ.ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ ವೂಡೇ ಪಿ.ಕೃಷ್ಣ, ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಹೆಚ್.ಎಸ್. ದೊರೆಸ್ವಾಮಿ, ಸಾಹಿತಿ ಡಾ ಬೇ.ಗೋ.ರಮೇಶ್, ಗೌ ಕಾರ್ಯದರ್ಶಿ ಇಂದಿರಾಕೃಷ್ಣಪ್ಪ ಭಾಗವಹಿಸಿದ್ದರು.

# ದೇಶ ವಿಭಜನೆಗೆ ಗಾಂಧೀಜಿ ಕಾರಣರಲ್ಲ

ಬೆಂಗಳೂರು, ನ.30–ದೇಶ ವಿಭಜನೆ ಆಗಲು ಗಾಂಧೀಜಿ ಕಾರಣ ಎಂಬ ಆರೋಪಗಳಿವೆ. ಆದರೆ, ಇದು ಸತ್ಯಕ್ಕೆದೂರ ಎಂದು ಸ್ವಾತಂತ್ರ್ಯ ಹೋರಾಟಗಾರ ಹೆಚ್.ಎಸ್.ದೊರೆಸ್ವಾಮಿ ಹೇಳಿದರು.

ನಗರದಲ್ಲಿಂದು ಗಾಂಧಿ ಭವನದಲ್ಲಿ ಆಯೋಜಿಸಿದ್ದ, ಬಾಪೂ 150; ಗಾಂಧಿ ಅಂಗಳದಲ್ಲಿ ಗಾಂಧಿ ಚಿಂತಕರು ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದ ಅವರು, ಗಾಂಧಿ ಎಂದೂ ದೇಶ ವಿಭಜನೆಯ ಬಗ್ಗೆ ಚಿಂತಿಸಿದವರಲ್ಲ. ಪರಿಸ್ಥಿತಿಗಳ ಒತ್ತಡಗಳು ವಿಭಜನೆಗೆ ಕಾರಣವಾಯಿತು ಎಂದು ತಿಳಿಸಿದರು.

ಸಾರ್ವಜನಿಕ ಜೀವನಕ್ಕೆ ಬದುಕು ನಿರ್ಧಾರಿಸಿದಾಗ ಸ್ವಯಂ ಪ್ರೇರಿತವಾಗಿ ಬಡತನವನ್ನು ಒಪ್ಪಿಕೊಂಡೆ. ಯಾರ ಹಂಗಿನಲ್ಲೂ ಇರಬಾರದೆಂದು ತೀರ್ಮಾನಿಸಿ ಪ್ರಕಾಶನ ಸಂಸ್ಥೆ ಸ್ಥಾಪಿಸಿದೆ. ನಂತರ ಪತ್ರಿಕಾ ಕಚೇರಿ ಪ್ರಾರಂಭಿಸಿದೆ. ಅಷ್ಟೇ ಅಲ್ಲದೆ, ನನಗೆ ಸಂಸಾರ ಬಂದ ಮೇಲೆ ಪುಸ್ತಕ ಪ್ರಕಟನೆ ಮಾಡುತ್ತಿದ್ದೆ. ಪುಸ್ತಕ ಮಾರಾಟದಿಂದ ಬಂದ ಹಣದಿಂದ ಜೀವನ ನಡೆಸಿದೆ ಎಂದು ನೆನಪು ಮಾಡಿಕೊಂಡು.

ನಾವ್ಯಾರು ಪರಿಪೂರ್ಣರಲ್ಲ. ತಪ್ಪುಗಳಾಗುವುದು ಸಹಜ. ಆದರೆ, ತಪ್ಪುಗಳನ್ನು ತಿದ್ದಿಕೊಳ್ಳುವುದು ನಿಜವಾದ ಮನುಷ್ಯರು ಎಂದ ಅವರು, ತಾತ್ವಿಕ ವಿಚಾರದಲ್ಲಿ ಗಾಂಧೀಜಿ, ಅಂಬೇಡ್ಕರ್ ಭಿನ್ನಾಭಿಪ್ರಾಯಗಳು ಇತ್ತು. ಆದರೆ, ಪರಸ್ಪರ ಪ್ರೀತಿ, ವಿಶ್ವಾಸವೂ ಇತ್ತು ಎನ್ನುವುದನ್ನು ಮರೆಯಲಾಗದು ಎಂದು ದೊರೆಸ್ವಾಮಿ ಹೇಳಿದರು.

ಗಾಂಧೀಜಿಯವರ ಬಗ್ಗೆ ಬೆಳಕು ಚೆಲ್ಲುವ ಕಾರ್ಯಕ್ರಮಗಳನ್ನು ಮಾಡ ಬೇಕು, ಜನರರಲ್ಲಿ ಗಾಂಧೀಜಿಯವರ ಬಗ್ಗೆ ಅರಿವು ಮೂಡಿಸುವುದು ಸರ್ಕಾರದ ಕರ್ತವ್ಯ ಎಂದ ಅವರು, ಗಾಂಧಿ ತತ್ವ ಆದರ್ಶಗಳು ಅಂದು ಇಂದು- ಮುಂದಿಗೂ ಎಂದಿಗೂ ಶಾಶ್ವತವಾಗಿ ಉಳಿದುಕೊಳ್ಳುತ್ತದೆ ಎಂದು ನುಡಿದರು.

ಈ ಸಂದರ್ಭದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ, ಸಾಹಿತಿ ಬೇ.ಗೂ. ರಮೇಶ್, ಪರಿಸರ ವಾದಿ ನಾರಾಯಣ ರೆಡ್ಡಿ ಸೇರಿದಂತೆ ಪ್ರಮುಖರಿದ್ದರು.

ಉದಯವಾಣಿ

ಬುಧವಾರ, ನವೆಂಬರ್ 28, 2018

# ಶ್ರದ್ಧೆ, ಶಿಸ್ತಿನಿಂದ ಸಂಗೀತ ಸಾಧನೆ ಸಾಧ್ಯ

## ಸಂಗೀತೋತ್ಸವದಲ್ಲಿ ಹಿರಿಯ ಸಾಹಿತಿ, ಶಿಕ್ಷಣ ತಜ್ಞೆ ಡಾ. ಗೀತಾ ರಾಮಾನುಜಂ ಅಭಿಮತ

**ಕೆಂಗೇರಿ:** ಕಲೆ ಮಾರಾಟದ ವಸ್ತುವಲ್ಲ, ಶ್ರದ್ಧೆ ಮತ್ತು ಶಿಸ್ತಿನಿಂದ ಅಭ್ಯಾಸ ಮಾಡಿದರೆ ಮಾತ್ರ ಸರಸ್ವತಿ ಒಲಿಯುತ್ತಾಳೆ ಎಂದು ಹಿರಿಯ ಸಾಹಿತಿ, ಶಿಕ್ಷಣತಜ್ಞೆ ಡಾ. ಗೀತಾ ರಾಮಾನುಜಂ ಹೇಳಿದರು.

ಅವರು ಇಲ್ಲಿನ ಶೇಷಾದ್ರಿಪುರಂ ಕಾಲೇಜು ಸಭಾಂಗಣದಲ್ಲಿ ನಿನಾದ ಸಂಸ್ಕೃತಿ ಕಲಾಕೇಂದ್ರವು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗು ಶೇಷಾದ್ರಿಪುರಂ ಕಾಲೇಜು ಸಹಯೋಗದಲ್ಲಿ ನಡೆದ ರಾಜ್ಯ ಮಟ್ಟದ ಸಂಗೀತೋತ್ಸವ ನಾದಸಿರಿ-2018ರಲ್ಲಿ ಪಂ.ಆರ್.ವಿ.ಶೇಷಾದ್ರಿ ಗವಾಯಿಗಳ ನೆನಪಿನಲ್ಲಿ ನಾದ ಸರಸ್ವತಿ ಪ್ರಶಸ್ತಿಯನ್ನು ಕರ್ನಾಟಕ ಕಲಾಶ್ರೀ ಹಿಂದೂಸ್ತಾನಿ ಕಲಾವಿದ ಪಂ.ಬಿ.ವಿ. ರಾಧಾಕೃಷ್ಣಅವರಿಗೆ ಪ್ರದಾನ ಮಾಡಿದರು. ಬಳಿಕ ಮಾತನಾಡಿದ ಅವರು, ವೃತ್ತಿಧರ್ಮದೊಡನೆ ಅಭಿರುಚಿಯು ಬೆರೆತರೆ ಎಲ್ಲ ರಂಗದಲ್ಲೂ ಯಶಸ್ಸು ಸಾಧ್ಯ ಎಂದರು. ಫಲಾಫಲದ ನಿರೀಕ್ಷೆಯಲ್ಲಿ ಕರ್ಮ ಮಾಡಿದರೆ ಚಿಂತೆ ಬಾಧಿಸುವುದು. ಕಠಿಣ ಪರಿಶ್ರಮದಿಂದ ಸಕಾರಾತ್ಮಕ ಫಲ ದೊರೆಯುವುದು ನಿಶ್ಚಿತ ಎಂದು ಹೇಳಿದರು. ಮುಖ್ಯ ಅತಿಥಿ ಗಾಂಧಿ ಅಧ್ಯಯನ ಕೇಂದ್ರದ ಅಧ್ಯಕ್ಷ ಡಾ. ವೂಡೇ. ಪಿ. ಕೃಷ್ಣ ಮಾತನಾಡಿ ವಿದ್ಯಾ



ಪಂ. ಆರ್.ವಿ.ಶೇಷಾದ್ರಿ ಗವಾಯಿಗಳ ನೆನಪಿನಲ್ಲಿ ನಾದ ಸರಸ್ವತಿ ಪ್ರಶಸ್ತಿಯನ್ನು ಕರ್ನಾಟಕ ಕಲಾಶ್ರೀ ಹಿಂದೂಸ್ತಾನಿ ಕಲಾವಿದ ಪಂ. ಬಿ.ವಿ.ರಾಧಾಕೃಷ್ಣ ಅವರಿಗೆ ಹಿರಿಯ ಸಾಹಿತಿ, ಶಿಕ್ಷಣತಜ್ಞೆ ಡಾ. ಗೀತಾ ರಾಮಾನುಜಂ ಪ್ರದಾನ ಮಾಡಿದರು.

ಸಂಸ್ಥೆಗಳು ಸಮರ್ಪಕವಾಗಿ ಕೆಲಸ ಮಾಡಬೇಕಾದರೆ ಸಮುದಾಯದ ಸಂಪರ್ಕವಿರಬೇಕು ಹಾಗೇ ಆದಾಗ ಮಾತ್ರ ಅದು ಯಶಸ್ವಿಯಾಗುತ್ತೆ ಎಂದು ಹೇಳಿದರು. ಪ್ರಶಸ್ತಿಯನ್ನು ಸ್ವೀಕರಿಸಿದ ಪಂ. ಬಿ.ವಿ.ರಾಧಾಕೃಷ್ಣ ಮಾತನಾಡಿ ಸಂಗೀತ ಕ್ಷೇತ್ರದಲ್ಲಿ ಸುಗಮ ಸಂಗೀತ ಅತ್ಯಂತ ಪ್ರಭಾವಿ ಭಾಗವಾಗಿದೆ ಈ ಕ್ಷೇತ್ರಕ್ಕೆ ಪಿ.ಕಾಳಿಂಗರಾವ್, ಸಿ.ಅಶ್ವಥ್, ಅನಂತಸ್ವಾಮಿ, ಬಿ.ಕೆ.ಸುಮಿತ್ರ, ಕಸ್ತೂರಿ ಶಂಕರ್ ಸೇರಿದಂತೆ ಅನೇಕರ ಕೊಡುಗೆಯಿದೆ ಎಂದು ಹೇಳಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ತಬಲಾ ವಾದಕ ಪಂ.ಸತೀಶ್ ಹಂಪಿಹೊಳಿ ಮಾತನಾಡಿ, ಸಿದ್ಧಿ ದೊರಕಿದ ಮೇಲೆ ಪ್ರಸಿದ್ಧಿಗೆ ಬರಬೇಕು ಯಾವುದೇ ಸಿದ್ಧಿ ಮಾಡದೆ ಇಂದು ಅನೇಕ ಜನರು ಪ್ರಸಿದ್ಧಿಗೆ ಬರುತ್ತಿದ್ದಾರೆ. ಪ್ರಚಾರದ ಭರಾಟೆಯಲ್ಲಿ ಮಿಂಚುವ ಅವರು ಅಷ್ಟೇ ವೇಗವಾಗಿ ಕಣ್ಮರೆಯಾಗಬೇಕಾಗುತ್ತಾರೆ ಎಂದು ಹೇಳಿದರು.

ವಿಶೇಷ ಆಹ್ವಾನಿತರಾಗಿ ಬಿ.ಕೆ. ಸುಮಿತ್ರಾ, ಉಪಾಸನಾ ಮೋಹನ್, ಗೀತಾ ಸತ್ಯಮೂರ್ತಿ, ಸುರೇಖಾ, ನಿನಾದ ಸಂಸ್ಕೃತಿ ಕಲಾಕೇಂದ್ರದ ಅಧ್ಯಕ್ಷ ಹರೀಶ ನರಸಿಂಹ, ಎಮ್.ಮುರಳೀಧರ, ಪ್ರೊ. ಜಯರಾಮ ಸಂಧ್ಯಾಭಟ್ಟ ಪಾಲ್ಗೊಂಡಿದ್ದರು. ಗೀತ ಗಾಯನವನ್ನು ಗರ್ತಿಕೆರೆ ರಾಘಣ್ಣ ಶ್ರೀದೇವಿ ಗರ್ತಿಕೆರೆ, ಚಾಂದಿನಿ ಗರ್ತಿಕೆರೆ, ಶ್ರೀರಕ್ಷಾ ಪ್ರಿಯಾರಾಂ, ರಾಘವೇಂದ್ರ ಬೀಜಾಡಿ, ವೆಂಕಟೇಶ ಮೂರ್ತಿ ಶಿರೂರ, ಆನಂದ ಮಾದಲಗೆರೆ ಇತರರಿದ್ದರು. ಇದರ ಜತೆಗೆ ನಿನಾದ ಸಂಸ್ಕೃತಿ ಕಲಾಕೇಂದ್ರ, ಭಾವ ಸಾಗರದಿಂದ ಸಮೂಹ ಗಾಯನ ನಡೆಯಿತು.ಡಾ.ವೂಡೇ. ಪಿ. ಕೃಷ್ಣ ದಿನೇಶ್ ಗುರೂಜಿ, ಪಂ.ಸತೀಶ್ ಹಂಪಿಹೊಳಿ ಇದ್ದರು.



ಯಲಹಂಕದ ಶೇಷಾದ್ರಿಪುರಂ ಸಮೂಹ ಸಂಸ್ಥೆಗಳ ಪ್ರಥಮ ದರ್ಜೆ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ಸ್ನೇಹ ಸಮ್ಮಿಲನ ಕಾರ್ಯಕ್ರಮವನ್ನು ಬೇಲೂರಿನ ರಾಮಕೃಷ್ಣ ಮಠ ಮತ್ತು ರಾಮಕೃಷ್ಣ ಮಿಷನ್‌ನ ಪ್ರಧಾನ ಕಾರ್ಯದರ್ಶಿ ಸುವೀರಾನಂದಜೀ ಮಹಾರಾಜ್ ಉದ್ಘಾಟಿಸಿದರು. ತುಮಕೂರು ರಾಮಕೃಷ್ಣಾಶ್ರಮದ ಶ್ರೀ ವೀರೇಶಾನಂದ ಸರಸ್ವತಿ ಸ್ವಾಮೀಜಿ, ಸಂಸ್ಥೆಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೆ.ಪಿ.ಕೃಷ್ಣ, ಬಿ.ಎಂ.ಪಾರ್ಥಸಾರಥಿ, ಬಿ.ಎಸ್.ಹೆಂಜಾರಪ್ಪ, ಅನಿಲ್‌ಕುಮಾರ್, ಎಸ್.ಶೇಷನಾರಾಯಣ, ಎಂ.ಎಸ್.ನಟರಾಜ್ ಮತ್ತಿತರರು ಹಾಜರಿದ್ದರು.

ಸಂಯುಕ್ತ  ಕರ್ನಾಟಕ

ಬುಧವಾರ, 28, ನವೆಂಬರ್, 2018

# ಶ್ರದ್ಧೆ ಇದ್ದವರಿಗಷ್ಟೆ ಸರಸ್ವತಿ ಒಲಿವು

**ಸಂ.ಕ.ಸಮಾಚಾರ ಕೆಂಗೇರಿ**

ಕಲೆ ಎಂಬುದು ಮಾರಾಟದ ವಸ್ತುವಲ್ಲ. ಶ್ರದ್ಧೆ ಮತ್ತು ಶಿಸ್ತಿನಿಂದ ಅಭ್ಯಾಸ ಮಾಡಿದರೆ ಮಾತ್ರ ಸರಸ್ವತಿ ಒಲಿಯುತ್ತಾಳೆ ಎಂದು ಶಿಕ್ಷಣ ತಜ್ಞೆ ಗೀತಾ ರಾಮಾನುಜಂ ಅಭಿಪ್ರಾಯಪಟ್ಟರು.

ಕೆಂಗೇರಿಯ ಶೇಷಾದ್ರಿಪುರ ಕಾಲೇಜಿನಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಹಯೋಗದಲ್ಲಿ ಆಯೋಜಿಸಲಾಗಿದ್ದ ರಾಜ್ಯಮಟ್ಟದ ಸಂಗೀತೋತ್ಸವ ನಾದಸಿರಿ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದ ಅವರು, ವೃತ್ತಿ ಧರ್ಮದೊಡನೆ ಅಭಿರುಚಿಯು ಬೆರೆತರೆ ಯಾವುದೇ ರಂಗದಲ್ಲೂ ಯಶಸ್ಸು ಕಟ್ಟಿಟ್ಟಬುತ್ತಿ. ಫಲಾಫಲದ ನಿರೀಕ್ಷೆಯಲ್ಲಿ ಕರ್ಮ ಮಾಡಿದರೆ ಚಿಂತೆ ಬಾಧಿಸುತ್ತದೆ. ಕಠಿಣ ಪರಿಶ್ರಮ ಮಾಡಿದರೆ ಸಕಾರಾತ್ಮಕ ಫಲಿತಾಂಶ ದೊರಕುವುದರಲ್ಲಿ ಯಾವುದೇ ಅನುಮಾನ ಬೇಡ ಎಂದರು.

ಗಾಂಧಿ ಅಧ್ಯಯನ ಕೇಂದ್ರದ ಅಧ್ಯಕ್ಷ ಡಾ. ವೂಡೇ ಪಿ.ಕೃಷ್ಣ ಮಾತನಾಡಿ ವಿದ್ಯಾ ಸಂಸ್ಥೆಗಳು ಸಮರ್ಪಕವಾಗಿ ಕೆಲಸ ಮಾಡಬೇಕಾದರೆ ಸಮುದಾಯದ ಸಂಪರ್ಕವಿರಬೇಕು ಹಾಗೇ ಆದಾಗ ಮಾತ್ರ ಅದು ಯಶಸ್ವಿಯಾಗುತ್ತೆ. ಆ ರೀತಿಯ ಕಾರ್ಯವನ್ನು ಶೇಷಾದ್ರಿಪುರ ಶಿಕ್ಷಣ ದತ್ತಿ ಮಾಡುತ್ತಿದೆ ಎಂದರು. ನಾದ ಸರಸ್ವತಿ ಪ್ರಶಸ್ತಿ ಸ್ವೀಕರಿಸಿದ ಪಂ. ಬಿ.ವಿ.ರಾಧಾಕೃಷ್ಣ ಮಾತನಾಡಿ, ಸಂಗೀತ ಕ್ಷೇತ್ರದಲ್ಲಿ ಸುಗಮ ಸಂಗೀತ ಅತ್ಯಂತ ಪ್ರಭಾವಿ ಭಾಗವಾಗಿದೆ ಈ ಕ್ಷೇತ್ರಕ್ಕೆ ಪಿ. ಕಾಳಿಂಗರಾವ್, ಸಿ.ಅಶ್ವಥ್, ಅನಂತಸ್ವಾಮಿ, ಬಿ.ಕೆ.ಸುಮಿತ್ರ, ಕಸ್ತೂರಿ ಶಂಕರ್ ಕೊಡುಗೆ ಅಪಾರ ಎಂದರು.

ಈ ಸಂಜೆ
ಮಂಗಳವಾರ,20-11-2018



ಹಂಸಜ್ಯೋತಿ ಸಂಸ್ಥೆ ವತಿಯಿಂದ ನಗರದಲ್ಲಿಂದು ಹಮ್ಮಿಕೊಂಡಿದ್ದ ಸಾಂಸ್ಕೃತಿಕ ಸಾಮಾಜಿಕ ಸಿಂಚನ ಕಾರ್ಯಕ್ರಮವನ್ನು ಹಿರಿಯ ನಟಿ ಹರಿಣಿ ಉದ್ಘಾಟಿಸಿದರು. ಹಿರಿಯ ನಟ ರಾಜೇಶ್, ಗಾಂಧಿ ಸ್ಮಾರಕ ಕೇಂದ್ರದ ಡಾ.ವೂಡೆ ಪಿ.ಕೃಷ್ಣ, ಕಿದ್ವಾಯಿ ಆಸ್ಪತ್ರೆ ನಿರ್ದೇಶಕ ಪ್ರೊ.ಸಿ.ರಾಮಚಂದ್ರ ಮತ್ತಿತರರಿದ್ದರು.

ವಾ... ಭಾರತಿ

# ‘ನೈಸರ್ಗಿಕ ಗ್ರಾಮಗಳ ನಿರ್ಮಾಣಕ್ಕೆ ಒತ್ತು’



ಬೆಂಗಳೂರು, ನ.18: ಆಧುನಿಕತೆಯ ಓಡೆತಕ್ಕೆ ಸಿಕ್ಕಿ ಹಸಿರನ್ನು ಕಳೆದುಕೊಂಡಿರುವ ಹಳ್ಳಿಗಳನ್ನು ನೈಸರ್ಗಿಕ ಗ್ರಾಮಗಳನ್ನಾಗಿ ಪರಿವರ್ತಿಸುವ ನಿಟ್ಟಿನಲ್ಲಿ ಅಗತ್ಯ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ ಎಂದು ಆರೋಗ್ಯ ಸಚಿವ ಶಿವಾನಂದ ಎಸ್.ಪಾಟೀಲ್ ತಿಳಿಸಿದರು.

ಇಂಡಿಯಾ ನ್ಯಾಚುರೋಪತಿ ಹಾಗೂ ಯೋಗ ಗ್ರ್ಯಾಜುಯೇಟ್ಸ್ ಮೆಡಿಕಲ್ ಅಸೋಸಿಯೇಷನ್ ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ಆಯೋಜಿಸಿದ್ದ ಮೊದಲನೇ ರಾಷ್ಟ್ರೀಯ ಪ್ರಕೃತಿ ಚಿಕಿತ್ಸಾ ದಿನಾಚರಣೆ ಉದ್ಘಾಟಿಸಿ ಮಾತನಾಡಿದ ಅವರು, ಪ್ರಾಯೋಗಿಕವಾಗಿ ಒಂದು ಗ್ರಾಮವನ್ನು ದತ್ತು ಪಡೆದುಕೊಂಡು, ಗ್ರಾಮವನ್ನು ಸಂಪೂರ್ಣವಾಗಿ ಹಸಿರುಮಯಗೊಳಿಸುವ ಯೋಜನೆ ಸಿದ್ಧಗೊಂಡಿದೆ ಎಂದು ತಿಳಿಸಿದರು.

ನಮ್ಮ ಸುತ್ತಮುತ್ತಲ ಪರಿಸರವನ್ನು ಶುದ್ಧವಾಗಿಟ್ಟುಕೊಂಡರೆ, ಯಾವ ರೋಗವು ಬರುವುದಿಲ್ಲ. ನೀರು, ಗಾಳಿ, ಮಣ್ಣನ್ನು ಕಲುಷಿತ ಮಾಡಿದ ಪರಿಣಾಮದಿಂದಾಗಿ ರೋಗಗಳು ಕಾಣಿಸಿಕೊಳ್ಳುತ್ತಿವೆ. ಹೀಗಾಗಿ ಕಾಡನ್ನು ಸಂರಕ್ಷಿಸುವ ಮೂಲಕ ಶುದ್ಧ ಗಾಳಿ, ನೀರನ್ನು ಪಡೆದು ಆರೋಗ್ಯವನ್ನು ಸುಧಾರಿಸಿಕೊಳ್ಳೋಣವೆಂದು ಅವರು ಹೇಳಿದರು.

ಎಸ್-ವ್ಯಾಸ ವಿವಿದ್ಯಾಲಯದ ಕುಲಪತಿ ಡಾ.ಎಚ್.ಆರ್.ನಾಗೇಂದ್ರ ಮಾತನಾಡಿ, ಸಾವಿರಾರು ವರ್ಷಗಳ ಹಿಂದೆಯೆ ಭಾರತ ಆರೋಗ್ಯ ಕ್ಷೇತ್ರದಲ್ಲಿ ವಿಶ್ವಕ್ಕೆ ಮಾದರಿಯಾಗಿತ್ತು. ನಮ್ಮ ಋಷಿ ಮುನಿಗಳು ಪ್ರಕೃತಿ ಚಿಕಿತ್ಸೆಯ ಮೂಲಕ ಜನರಿಗೆ ಎಲ್ಲ ರೀತಿಯಲ್ಲಿ ರೋಗಕ್ಕೆ ಚಿಕಿತ್ಸೆ ನೀಡುತ್ತಿದ್ದರು. ಆದರೆ, ಇವತ್ತು ನಮ್ಮ ಚಿಕಿತ್ಸಾ ಪದ್ಧತಿಯನ್ನು ಮರೆತು, ಪಾಶ್ಚಿಮಾತ್ಯ ಚಿಕಿತ್ಸಾ ಪದ್ಧತಿಗೆ ಮಾರು ಹೋಗಿದ್ದೇವೆ ಎಂದು ವಿಷಾದಿಸಿದರು.

ರಾಜೀವ್‌ಗಾಂಧಿ ವಿಶ್ವವಿದ್ಯಾಲಯದ ಉಪಕುಲಪತಿ ಮಾತನಾಡಿ, ಪ್ರಕೃತಿ ಚಿಕಿತ್ಸೆಯನ್ನು ಈ ಕಾಲಕ್ಕೆ ಸೂಕ್ತವಾಗುವಂತೆ ಪರಿವರ್ತಿಸಿಕೊಳ್ಳಬೇಕಿದೆ. ಈ ನಿಟ್ಟಿನಲ್ಲಿ ಪ್ರಕೃತಿ ಚಿಕಿತ್ಸೆಗೆ ಸಂಬಂಧಿಸಿದಂತೆ ಮತ್ತಷ್ಟು ಸಂಶೋಧನೆಗಳಾಗಲಿ ಎಂದು ಆಶಿಸಿದರು. ಈ ವೇಳೆ ವಿಶ್ವ ನ್ಯಾಚುರೋಪತಿ ಫೆಡರೇಷನ್ ಕಾರ್ಯದರ್ಶಿ ಪ್ರೊ.ಜಾನ್ ವಾರ್ಡ್ಲ, ಆಯುಷ್ ಮಂತ್ರಾಲಯದ ಆಯುಕ್ತೆ ಮೀನಾಕ್ಷಿ ನೇಗಿ, ಗಾಂಧಿ ಭವನದ ಅಧ್ಯಕ್ಷ ವೂಡೇ ಕೃಷ್ಣ ಮತ್ತಿತರರಿದ್ದರು.

### ಬೇಡಿಕೆಗಳು

- ತಾಲೂಕು ಆಸ್ಪತ್ರೆಗಳಲ್ಲಿ ಪ್ರಕೃತಿ ಚಿಕಿತ್ಸಾ ಘಟಕಗಳನ್ನು ತೆರೆಯಬೇಕು.
- ಜಯದೇವ ಆಸ್ಪತ್ರೆಯ ಮಾದರಿಯಲ್ಲಿ ಪ್ರಕೃತಿ ಚಿಕಿತ್ಸಾ ಆಸ್ಪತ್ರೆಯನ್ನು ತೆರೆಯಬೇಕು.
- ಆಯುಷ್ ವೈದ್ಯರ ಹುದ್ದೆಗಳನ್ನು ಹೆಚ್ಚಿಸಬೇಕು.

### ಪ್ರಕೃತಿ ಚಿಕಿತ್ಸಾಲಯಗಳ ಸ್ಥಾಪನೆ

ರಾಜ್ಯದಲ್ಲಿ ಆಯುರ್ವೇದ ಆಸ್ಪತ್ರೆಗಳ ಮಾದರಿಯಲ್ಲಿ ಪ್ರಕೃತಿ ಚಿಕಿತ್ಸಾಲಯಗಳನ್ನು ಸ್ಥಾಪಿಸಲು ಅಗತ್ಯ ಕ್ರಮ ಕೈಗೊಳ್ಳಲಾಗುತ್ತಿದೆ. ಮುಂದಿನ ಬಜೆಟ್‌ನಲ್ಲಿ ಆಯುಷ್ ಇಲಾಖೆಗೆ ವಿಶೇಷ ಅನುದಾನವನ್ನು ನೀಡಲು ಪ್ರಾಮಾಣಿಕ ಪ್ರಯತ್ನ ಮಾಡಲಾಗುವುದು.

-ಶಿವಾನಂದ ಎಸ್.ಪಾಟೀಲ್, ಆರೋಗ್ಯ ಸಚಿವ

ಹೊಸ ದಿಗಂತ
ಗುರುವಾರ 1 ನವೆಂಬರ್ 2018, ಬೆಂಗಳೂರು

# ಗಾಂಧೀಜಿಗಿತ್ತು ತಾತ್ವಿಕ ಒಳನೋಟ



• ದಿಗಂತ ವರದಿ, ಬೆಂಗಳೂರು

ಗಾಂಧೀಜಿ ಅವರು ತಾತ್ವಿಕ ಹೊರನೋಟ ಮತ್ತು ಒಳನೋಟ ಹೊಂದಿದ್ದರು ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಹೇಳಿದರು.

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದಲ್ಲಿ ಮಂಗಳವಾರ ಗಾಂಧೀಜಿ ಅವರ ತಾತ್ವಿಕ ಚಿಂತನೆಗಳು ಎಂಬ ವಿಷಯದ ಬಗ್ಗೆ ವಿಶೇಷ ವಿಚಾರ ಸಂಕಿರಣದಲ್ಲಿ ಮಾತನಾಡಿದ ಅವರು, ಅಹಿಂಸಾತ್ಮಕ ಮತ್ತು ಸಮುದಾಯಾತ್ಮಕ ಸಮಾಜದ ಕಲ್ಪನೆ ಹೊಂದಿದ್ದರು. ಸತ್ಯ, ಅಂಸೆ, ಸತ್ಯಾಗ್ರಹ, ಸರ್ವೋದಯ ಎಂಬ ಈ ನಾಲ್ಕು ಸ್ತಂಭಗಳನ್ನು ಅವರು ಅವಲಂಬಿಸಿದ್ದರು ಎಂದರು. ಗಾಂಧೀಜಿ ಅವರ ಆಶಯಗಳು ಇಂದಿಗೂ ಪ್ರಸ್ತುತವಾಗಿದ್ದು, ಕೋಮುಸೌಹಾರ್ದ, ಅಸ್ಪೃಶ್ಯತೆ ನಿವಾರಣೆ, ಸ್ವದೇಶಿ ಭಾವನೆ ಮುಂತಾದ ತತ್ವ ಅವರು ಆಗಲೇ ಪ್ರತಿಪಾದಿಸಿದ್ದರು. ದೋಷವಿಲ್ಲದ ಮನಸ್ಸಿನಿಂದ ಮಾತ್ರ ಯಾವುದೇ ಸಾಧನೆ ಮಾಡಲು ಸಾಧ್ಯ. ಗಾಂಧೀಜಿ ಅವರು ಜಾಗತಿಕ ನಾಯಕರು ಎಂದರು.

ಸಂಸ್ಕೃತ ವಿವಿ ಕುಲಪತಿ ಪ್ರೊ. ಪದ್ಮಾಶೇಖರ್, ಚಂದನಾ ಗಿರೀಶ್ ಹೆಗಡೆ, ವಿವಿಯ ಭಾಷಾ ನಿಕಾಯದ ಡೀನ್ ಪ್ರೊ. ಗಿರೀಶ್ ಚಂದ್ರ, ಉಪಕುಲಸಚಿವ ಪ್ರಕಾಶ್ ಉಪಸ್ಥಿತರಿದ್ದರು.

ಸುವರ್ಣ ಟೈಮ್ಸ್ ಆಫ್ ಕರ್ನಾಟಕ

ಗುರುವಾರ, 01 ನವೆಂಬರ್ 2018



## ಪುತ್ಥಳಿ ಅನಾವರಣ...

ಬೆಂಗಳೂರು: ಎಂಎಸ್‌ಟಿಐ ಕಾಲೇಜಿನಲ್ಲಿ ಭಾರತರತ್ನ ಸರ್.ಎಂ.ವಿಶ್ವೇಶ್ವರಯ್ಯನವರ ಪುತ್ಥಳಿಯನ್ನು ಬಿಬಿಎಂಪಿ ಸದಸ್ಯ ಕೆ. ನಾಗಭೂಷಣ್ ಅನಾವರಣಗೊಳಿಸಿದರು. ಈ ವೇಳೆ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಡಾ. ಮನು ಬಳಿಗಾರ್, ಖ್ಯಾತ ಶಿಕ್ಷಣ-ತಜ್ಞ ಡಾ.ವುಡೆ ಪಿ. ಕೃಷ್ಣ, ಕಾಲೇಜಿನ ಅಧ್ಯಕ್ಷ ಬಿ.ಟಿ.ರಾಜಶೇಖರ್, ಕಾಲೇಜಿನ ಕಾರ್ಯದರ್ಶಿ ಡಿ.ಎನ್. ಹರಿದಾಸ್, ಉಪಾಧ್ಯಕ್ಷ ಟಿ.ಎಸ್. ರಾಜಗೋಪಾಲ್ ಉಪಸ್ಥಿತರಿದ್ದರು.

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ
ಸೋಮವಾರ 19 ನವೆಂಬರ್ 2018

# ರಾಜ್ಯದ ಗ್ರಾಮಗಳಿನ್ನು ನಿಸರ್ಗಸ್ನೇಹಿ

## ಮಹಾರಾಷ್ಟ್ರ ಮಾದರಿ ಅಭಿವೃದ್ಧಿ । ಶಿವಾನಂದ ಪಾಟೀಲ್ ಹೇಳಿಕೆ

ಬೆಂಗಳೂರು: ಪ್ರಕೃತಿಗೆ ಪೂರಕವಾಗಿ ಜೀವನಶೈಲಿ ನಿರ್ವಹಣೆ ಪುನಶ್ಚೇತನಗೊಳಿಸುವ ದೃಷ್ಟಿಯಿಂದ ಮಹಾರಾಷ್ಟ್ರ ರಾಜ್ಯ ಮಾದರಿಯಲ್ಲಿ ರಾಷ್ಟ್ರೀಯ ಪ್ರಕೃತಿ ಗ್ರಾಮವನ್ನಾಗಿಸಲು ರಾಜ್ಯ ಸರ್ಕಾರ ಮಾದರಿ ಗ್ರಾಮವೊಂದನ್ನು ದತ್ತು ತೆಗೆದುಕೊಳ್ಳಲಿದೆ ಎಂದು ಆರೋಗ್ಯ ಸಚಿವ ಶಿವಾನಂದ ಪಾಟೀಲ್ ಪ್ರಕಟಿಸಿದರು.

ವಿಧಾನಸೌಧದಲ್ಲಿ ಭಾರತೀಯ ಪ್ರಕೃತಿ ಚಿಕಿತ್ಸೆ ಹಾಗೂ ಯೋಗ ಪದವೀಧರರ ವೈದ್ಯಕೀಯ ಸಂಸ್ಥೆ (ಇನಿಗ್ಮಾ) ಆಯೋಜಿಸಿದ್ದ ಪ್ರಥಮ ರಾಷ್ಟ್ರೀಯ ಪ್ರಕೃತಿ ಚಿಕಿತ್ಸಾ ದಿನಾಚರಣೆ ಉದ್ಘಾಟಿಸಿದ ಅವರು, ಮಹಾರಾಷ್ಟ್ರದಲ್ಲಿ ಗ್ರಾಮಗಳನ್ನು ಪ್ರಕೃತಿ ಸಹಜ ವಾಸಸ್ಥಳಗಳನ್ನಾಗಿ ಅಭಿವೃದ್ಧಿಪಡಿಸುವ ಕಾರ್ಯಕ್ರಮ ಜಾರಿಯಲ್ಲಿದೆ. ಅದೇ ರೀತಿಯಾಗಿ ರಾಜ್ಯದ ಒಂದು ಗ್ರಾಮವನ್ನು ಸಂಪೂರ್ಣ ನಿಸರ್ಗಸ್ನೇಹಿಯಾಗಿ ಪರಿವರ್ತನೆ ಮಾಡಲಾಗುವುದು. ಹಂತಹಂತವಾಗಿ ಇಂತಹ ಹಲವು ಗ್ರಾಮಗಳನ್ನು ಅಭಿವೃದ್ಧಿ ಮಾಡಲಾಗುವುದು ಎಂದರು. ರಾಜ್ಯದ ಸರ್ಕಾರಿ ಆಯುರ್ವೇದ ಆಸ್ಪತ್ರೆಗಳಲ್ಲಿ ಪ್ರಕೃತಿ ಚಿಕಿತ್ಸಾ ಘಟಕ ತೆರೆಯುವ ಚಿಂತನೆ ಇದೆ. ಮುಂದಿನ ಹಣಕಾಸು ವರ್ಷದಿಂದ ಹೊಸ ಕಾರ್ಯಕ್ರಮ ಅನುಷ್ಠಾನಗೊಳಿಸಲಾಗುವುದು ಎಂದರು. ಇನಿಗ್ಮಾ ಮಹಾಪ್ರಧಾನ ಕಾರ್ಯದರ್ಶಿ ಡಾ.ಪ್ರಶಾಂತ್ ಶೆಟ್ಟಿ ಮತ್ತಿತರರಿದ್ದರು.




ವಿಜಯವಾಣಿ ಅಂಕಣಕಾರ ಡಾ.ವೆಂಕಟ್ರಮಣ ಹೆಗಡೆರವರ ನಿಸರ್ಗ ಚಿಕಿತ್ಸೆ ಕೃತಿಯನ್ನು ಸಚಿವ ಶಿವಾನಂದ ಪಾಟೀಲ್ ಲೋಕಾರ್ಪಣೆಗೊಳಿಸಿದರು.

> ರಾಜ್ಯದ ಸರ್ಕಾರಿ ಆಯುರ್ವೇದ ಆಸ್ಪತ್ರೆಗಳಲ್ಲಿ ಗುತ್ತಿಗೆ ಆಧಾರದಲ್ಲಿ ಸೇವೆ ಸಲ್ಲಿಸುತ್ತಿರುವ ವೈದ್ಯರನ್ನು ಕಾಯಂಗೊಳಿಸಲು ಹಿಂದಿನ ಕಾಂಗ್ರೆಸ್ ಸರ್ಕಾರ ಭರವಸೆ ನೀಡಿತ್ತು. ಇದೀಗ ಸಿಎಂ ಕುಮಾರಸ್ವಾಮಿ ಜತೆ ಚರ್ಚಿಸಿ, ಕ್ರಮಕೈಗೊಳ್ಳಲಾಗುವುದು.
>
> । ಶಿವಾನಂದ ಪಾಟೀಲ್ ಆರೋಗ್ಯ ಸಚಿವ

ವಿಜಯ ಕರ್ನಾಟಕ ಸೋಮವಾರ, 19 ನವೆಂಬರ್ 2018, ಬೆಂಗಳೂರು

# ಆಯುಷ್ ವೈದ್ಯರ ಕಾಯಂ

## ಸಚಿವ ಶಿವಾನಂದ ಪಾಟೀಲ್ ಭರವಸೆ




ಬೆಂಗಳೂರಿನಲ್ಲಿ ಭಾನುವಾರ ನಡೆದ ರಾಷ್ಟ್ರೀಯ ಪ್ರಕೃತಿ ಚಿಕಿತ್ಸಾ ದಿನಾಚರಣೆಯಲ್ಲಿ ಆರೋಗ್ಯ ಸಚಿವ ಶಿವಾನಂದ ಪಾಟೀಲ್, ವೂಡೆ ಕೃಷ್ಣ ಮತ್ತಿತರರು ಭಾಗವಹಿಸಿದ್ದರು.

**ವಿಕ ಸುದ್ದಿಲೋಕ** ಬೆಂಗಳೂರು

ಆಯುಷ್ ಇಲಾಖೆಯಡಿ ಕಾರ್ಯನಿರ್ವಹಿಸುತ್ತಿರುವ ವೈದ್ಯರನ್ನು ಕಾಯಂಗೊಳಿಸಲು ಶೀಘ್ರ ಪ್ರಕ್ರಿಯೆ ಆರಂಭಿಸಲಾಗುವುದು ಎಂದು ಆರೋಗ್ಯ ಸಚಿವ ಶಿವಾನಂದ ಎಸ್.ಪಾಟೀಲ್ ಭರವಸೆ ನೀಡಿದರು.

ಆಯುಷ್ ಇಲಾಖೆ ವಿಧಾನಸೌಧದ ಬ್ಯಾಂಕ್ವೆಟ್ ಸಭಾಂಗಣದಲ್ಲಿ ಆಯೋಜಿಸಿದ್ದ 'ಮೊದಲನೇ ರಾಷ್ಟ್ರೀಯ ಪ್ರಕೃತಿ ಚಿಕಿತ್ಸಾ ದಿನಾಚರಣೆ'ಯಲ್ಲಿ ಮಾತನಾಡಿದ ಅವರು, ''ಆಯುಷ್ ಪದ್ಧತಿಯು ನೈಸರ್ಗಿಕವಾಗಿ ನೀಡುವ ಚಿಕಿತ್ಸೆಯನ್ನೊಳಗೊಂಡಿದೆ. ಈ ಪದ್ಧತಿಯನ್ನು ಜನಪ್ರಿಯಗೊಳಿಸಲು ಇಲಾಖೆಯು ಹಲವು ಕ್ರಮ ಜಾರಿ ಮಾಡಿದೆ. ಆಯುಷ್ ಇಲಾಖೆಯಡಿ ಕೆಲಸ ಮಾಡುವ ವೈದ್ಯರನ್ನು ಕಾಯಂಗೊಳಿಸಬೇಕೆಂಬ ಆಗ್ರಹ ಬಹಳ ವರ್ಷಗಳಿಂದ ಕೇಳಿ ಬರುತ್ತಿದೆ. ಹಿಂದಿನ ಸಿಎಂ ಸಿದ್ದರಾಮಯ್ಯ ಈ ಕುರಿತು ಭರವಸೆಯನ್ನೂ ನೀಡಿದ್ದರು. ಈಗ ಸರಕಾರದಲ್ಲಿ ಈ ಬಗ್ಗೆ ಚರ್ಚಿಸಿ ಶೀಘ್ರ ಕ್ರಮ ಕೈಗೊಳ್ಳಲಾಗುವುದು,'' ಎಂದರು.

**ಪ್ರಕೃತಿ ಚಿಕಿತ್ಸೆಗೆ ಮಾದರಿ ಗ್ರಾಮ**

''ಮಹಾರಾಷ್ಟ್ರದಲ್ಲಿ ಅಂತರ್ಜಲ ಬತ್ತಿದ ಕೆಲ ಗ್ರಾಮಗಳನ್ನು ಗುರುತಿಸಿ ಮತ್ತೆ ಅಂತರ್ಜಲ ವೃದ್ಧಿಸುವ ಕಾರ್ಯಕ್ರಮಗಳನ್ನು ಜಾರಿ ಮಾಡಲಾಗಿದೆ. ಇದೇ ಮಾದರಿಯಲ್ಲಿ ಪ್ರಕೃತಿ ಚಿಕಿತ್ಸಾ ವಿಧಾನವನ್ನು ಹೊಂದಿರುವ ಮಾದರಿ ಗ್ರಾಮವನ್ನು ಅಭಿವೃದ್ಧಿಪಡಿಸಲು ನಿರ್ಧರಿಸಲಾಗಿದೆ. ಒಂದು ಗ್ರಾಮವನ್ನು ಆಯ್ಕೆ ಮಾಡಿಕೊಂಡು ಅಲ್ಲಿ ಪ್ರಕೃತಿ ಚಿಕಿತ್ಸೆ ಮಾತ್ರ ಲಭ್ಯವಿರುವ ಹಾಗೂ ಆ ಚಿಕಿತ್ಸೆಗೆ ತಕ್ಕಂತಹ ಪರಿಸರವನ್ನು ಬೆಳೆಸುವ ಯೋಜನೆ ಜಾರಿ ಮಾಡಲಾಗುವುದು,'' ಎಂದರು.

''ಈ ಬಾರಿ ರೈತರ ಸಾಲಮನ್ನಾ ಮಾಡಿರುವುದರಿಂದ ಆಯುಷ್ ಇಲಾಖೆಗೆ ನಿರೀಕ್ಷಿತ ಅನುದಾನ ಬಂದಿಲ್ಲ. ರಾಜ್ಯದಲ್ಲಿ ಸುಸಜ್ಜಿತ ಪ್ರಕೃತಿ ಚಿಕಿತ್ಸಾಲಯವನ್ನು ತೆರೆಯಲು ಪ್ರಯತ್ನ ನಡೆದಿದೆ. ಮುಂದಿನ ವರ್ಷಗಳಲ್ಲಿ ಈ ಕನಸು ನನಸಾಗಲಿದೆ,'' ಎಂದರು.

ಗಾಂಧಿ ಭವನದ ಅಧ್ಯಕ್ಷ ವೂಡೆ ಪಿ.ಕೃಷ್ಣ ವೈದ್ಯಕೀಯ ಸಂಘದ ಪ್ರಧಾನ ಕಾರ್ಯದರ್ಶಿ ಡಾ.ಪ್ರಶಾಂತ್ ಶೆಟ್ಟಿ, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಕುಲಪತಿ ಡಾ.ಎಸ್. ಸಚ್ಚಿದಾನಂದ ಮತ್ತಿತರರಿದ್ದರು.

ಮುಂದಿನ ತಲೆಮಾರಿಗೂ ಪ್ರಕೃತಿ ಚಿಕಿತ್ಸೆ ಮುಂದುವರಿಯಲಿ । ಪ್ರಕೃತಿಗಿಂತ ಅತ್ಯುತ್ತಮ ವೈದ್ಯರಿಲ್ಲ

# ಆಯುಷ್ ಇಲಾಖೆ ವೈದ್ಯರ ಹುದ್ದೆ ಕಾಯಂಗೆ ಮುಖ್ಯಮಂತ್ರಿ ಜತೆ ಚರ್ಚೆ

ವಿಶ್ವವಾಣಿ ಸುದ್ದಿಮನೆ ಬೆಂಗಳೂರು

ಸಿದ್ದರಾಮಯ್ಯ ಅವರು ಮುಖ್ಯಮಂತ್ರಿಯಾಗಿದ್ದಾಗ ಆಯುಷ್ ಇಲಾಖೆಯ ವೈದ್ಯರನ್ನು ಕಾಯಂಗೊಳಿಸುವುದಾಗಿ ಭರವಸೆ ನೀಡಿದ್ದರು. ಇದನ್ನು ಕಾರ್ಯಗತ ಗೊಳಿಸಲು ಸಮ್ಮಿಶ್ರ ಸರಕಾರ ಮುಂದಾಗಲಿದ್ದು, ಸಿಎಂ ಕುಮಾರಸ್ವಾಮಿ ಅವರ ಜತೆ ಚರ್ಚಿಸಿ ತೀರ್ಮಾನ ಕೈಗೊಳ್ಳುವುದಾಗಿ ಆರೋಗ್ಯ ಸಚಿವ ಶಿವಾನಂದ ಎಸ್.ಪಾಟೀಲ್ ಭರವಸೆ ನೀಡಿದರು.

ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ಭಾನುವಾರ ಏರ್ಪಡಿಸಿದ್ದ ಪ್ರಕೃತಿ ಚಿಕಿತ್ಸಾ ದಿನಾಚರಣೆಯನ್ನು ಉದ್ಘಾಟಿಸಿ ಮಾತನಾಡಿ, ಪ್ರಕೃತಿ ಚಿಕಿತ್ಸೆಯಿಂದ ಹಲವು ರೋಗಗಳನ್ನು ಗುಣಪಡಿಸಬಹುದು. ಪ್ರಕೃತಿ ಚಿಕಿತ್ಸೆ ಒಂದು ತಲೆಮಾರಿಗೆ ನಿಲ್ಲದೆ ಮುಂದುವರಿಯಬೇಕು. ಈ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಲಾಗುವುದು. ಪ್ರಕೃತಿಗಿಂತ ಅತ್ಯುತ್ತಮ ವೈದ್ಯರಿಲ್ಲ ಎಂದು ಅಭಿಪ್ರಾಯಪಟ್ಟರು.

ಪ್ರಕೃತಿ ಚಿಕಿತ್ಸೆ ವರವಿದ್ದಂತೆ. ಋಷಿ ಮುನಿಗಳು ಜನ ಸಾಮಾನ್ಯರಿಗೆ ನೀಡುತ್ತಿದ್ದ ದೈವದತ್ತ ಚಿಕಿತ್ಸೆ ಇದು. ಆಯುರ್ವೇದ ಆಸ್ಪತ್ರೆ ಮಾದರಿಯಲ್ಲೇ ಪ್ರತ್ಯೇಕವಾಗಿ ಪ್ರಕೃತಿ ಚಿಕಿತ್ಸಾ ಆಸ್ಪತ್ರೆಗಳನ್ನು ಆರಂಭಿಸುವ ಬಗ್ಗೆಯೂ ಸರಕಾರ ಗಮನ ಹರಿಸಲಿದೆ ಎಂದರು.

ಅಲೋಪತಿ ಪ್ರಕೃತಿ ಚಿಕಿತ್ಸಾ ಪದ್ಧತಿ ಎಲ್ಲವನ್ನು ಏಕೀಕೃತಗೊಳಿಸಿ ಆರೋಗ್ಯ ಕಾಪಾಡುವ ಔಷಧಿಗಳನ್ನು ರೂಪಿಸುವ ಮೂಲಕ ಜನರ ಆರೋಗ್ಯ ಕಾಪಾಡುವಂತೆಯೂ ಗಮನ ನೀಡುತ್ತೇವೆ ಎಂದು ಹೇಳಿದರು.

ರೈತರ ಸಾಲಮನ್ನಾಕ್ಕೆ ಹೆಚ್ಚು ಅನುದಾನ ಪ್ರಸಕ್ತ ಸಾಲಿನಲ್ಲಿ ಬಳಕೆಯಾಗುತ್ತಿರುವುದರಿಂದ ಆಯುಷ್ ಇಲಾಖೆಗೆ ಅನುದಾನದ ಕೊರತೆ ಇದೆ. ಮುಂದಿನ ವರ್ಷ ಹೆಚ್ಚು ಅನುದಾನ ನೀಡಲಾಗುವುದು ಎಂದರು.



ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ಏರ್ಪಡಿಸಿದ್ದ ಪ್ರಕೃತಿ ಚಿಕಿತ್ಸಾ ದಿನಾಚರಣೆಯನ್ನು ಆರೋಗ್ಯ ಸಚಿವ ಶಿವಾನಂದ ಎಸ್.ಪಾಟೀಲ್ ಉದ್ಘಾಟಿಸಿದರು. ವ್ಯಾಸ ವಿವಿ ಕುಲಪತಿ ಡಾ.ನಾಗೇಂದ್ರ, ಗಾಂಧಿ ಭವನದ ಅಧ್ಯಕ್ಷ ವೂಡೇ ಪಿ.ಕೃಷ್ಣ ಇದ್ದರು.

## ಇನ್ನಷ್ಟು ಸಂಶೋಧನೆಯಾಗಲಿ

ವ್ಯಾಸ ವಿವಿ ಕುಲಪತಿ ಡಾ. ನಾಗೇಂದ್ರ ಮಾತನಾಡಿ, ರೋಗ ವಾಸಿ ಮಾಡುವುದಕ್ಕಿಂತ ರೋಗ ಬರದಂತೆ ತಡೆಯಬೇಕಿದೆ. ಪ್ರಕೃತಿ ಚಿಕಿತ್ಸೆಯಲ್ಲಿ ಇನ್ನಷ್ಟು ಸಂಶೋಧನೆಗಳಾಗಬೇಕು ಎಂದು ಆಶಿಸಿದರು. ಗಾಂಧಿ ಭವನದ ಅಧ್ಯಕ್ಷ ವೂಡೇ ಪಿ.ಕೃಷ್ಣ ಮಾತನಾಡಿ, ದೇಸಿ ವೈದ್ಯಕೀಯ ಪದ್ಧತಿಯಲ್ಲಿ ಹೆಚ್ಚು ಶಕ್ತಿ ಇದ್ದು ಇದನ್ನು ಬಳಸಿಕೊಳ್ಳಬೇಕಿದೆ ಎಂದು ಹೇಳಿದರು. ರಾಜೀವ್ ಗಾಂಧಿ ವಿಶ್ವ ವಿದ್ಯಾನಿಲಯದ ಉಪ ಕುಲಪತಿ ಡಾ. ಸಚ್ಚಿದಾನಂದ, ಆಯುಷ್ ಇಲಾಖೆ ಆಯುಕ್ತೆ ಮೀನಾಕ್ಷಿ ನೆಗ್ಗಿ, ಭಾರತೀಯ ಪ್ರಕೃತಿ ಚಿಕಿತ್ಸೆ ಹಾಗೂ ಯೋಗ ವೈದ್ಯಕೀಯ ಸಂಘದ ಅಧ್ಯಕ್ಷ ಡಾ. ನವೀನ್ ಇದ್ದರು.

## ರಾಷ್ಟ್ರೀಯ ಪ್ರಕೃತಿ ಮಾದರಿ ಗ್ರಾಮ

ಮಹಾರಾಷ್ಟ್ರದಲ್ಲಿ ಅಂತರ್ಜಲ ಮರುಪೂರಣ ಮಾಡಿ ಕಾಡನ್ನು ಬೆಳೆಸಿದ್ದಾರೆ. ನಮ್ಮಲ್ಲೂ ಅದೇ ರೀತಿ ಮಾಡಲು ಒಂದು ಹಳ್ಳಿಯನ್ನು ರಾಷ್ಟ್ರೀಯ ಪ್ರಕೃತಿ ಮಾದರಿ ಗ್ರಾಮವನ್ನಾಗಿ ಮಾಡಲಾಗುವುದು ಎಂದು ಶಿವಾನಂದ ಎಸ್.ಪಾಟೀಲ್ ಹೇಳಿದರು. ಕಾಡು ಹಾಳು ಮಾಡುವುದರಿಂದ ಅಮೂಲ್ಯವಾದ ಪ್ರಕೃತಿ ಸಂಪತ್ತು, ಔಷಧೀಯ ಸಸ್ಯಗಳು ನಾಶವಾಗುತ್ತಿವೆ. ಕಾಡು ಪ್ರಾಣಿಗಳು ನಾಡಿಗೆ ಬರುತ್ತಿವೆ. ಇದನ್ನು ತಪ್ಪಿಸುವತ್ತ ಸರಕಾರ ಗಮನ ಹರಿಸಲಿದೆ. ಪ್ರಕೃತಿ ಚಿಕಿತ್ಸೆಯನ್ನು ಜನಪ್ರಿಯಗೊಳಿಸಲು ಸರಕಾರ ನೆರವು ನೀಡಲಿದೆ ಎಂದು ಭರವಸೆ ನೀಡಿದರು.



ಭಾರತೀಯ ಅಂಚೆ ಇಲಾಖೆ ಹಾಗೂ ಸರ್ಕಾರಿ ಕಲಾ ಕಾಲೇಜು ಸಂಯುಕ್ತಾಶ್ರಯದಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್. ದೊರೆಸ್ವಾಮಿ ಅವರು ವಿಶೇಷ ಅಂಚೆ ಚೀಟಿ ಬಿಡುಗಡೆ ಮಾಡಿದರು. ಚೀಫ್ ಪೋಸ್ಟ್ ಮಾಸ್ಟರ್ ಡಾ.ಚಾರ್ಲ್ಸ್ ಲೋಬೋ, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ, ಎ.ಎಸ್. ತಿಪ್ಪನಗೌಡ, ಪ್ರೊ.ಎಸ್. ಮಲ್ಲೇಶ್ವರಪ್ಪ, ಪ್ರೊ.ಕೆ. ರಾಜಶೇಖರಪ್ಪ ಮತ್ತಿತರರಿದ್ದರು.

ಕನ್ನಡಪ್ರಭ ಬುಧವಾರ 31.10.2018

# ಮಹಾತ್ಮ ಗಾಂಧೀಜಿ ಶುದ್ಧತೆಯ ಪ್ರತೀಕ

## ಸತ್ಯ, ಅಹಿಂಸೆ, ಸರ್ವೋದಯ ತತ್ವಕ್ಕೆ ಬದ್ಧ ಜೀವನ

## ಸತ್ಯಾಗ್ರಹಕ್ಕೆ ತಾತ್ವಿಕ ನೆಲೆ ಕೊಟ್ಟ ಮಹಾತ್ಮ: ಪಿ.ಕೃಷ್ಣ



ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ ಮಂಗಳವಾರ ಆಯೋಜಿಸಿದ್ದ 'ಮಹಾತ್ಮ ಗಾಂಧೀಜಿ ಅವರ ತಾತ್ವಿಕ ಚಿಂತನೆಗಳು' ವಿಶೇಷ ಉಪನ್ಯಾಸ ಕಾರ್ಯಕ್ರಮವನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ ಉದ್ಘಾಟಿಸಿದರು. ಕುಲಪತಿ ಪ್ರೊ.ಪದ್ಮಾ ಶೇಖರ್, ಪ್ರೊ.ಎಸ್.ಶಿವರಾಜಪ್ಪ ಮತ್ತಿತರರಿದ್ದಾರೆ.

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಸಾರ್ವಜನಿಕ ಜೀವನದಲ್ಲಿರುವ ವ್ಯಕ್ತಿ ಹೇಗಿರಬೇಕು ಮತ್ತು ಸಾರ್ವಜನಿಕ ಹಣವನ್ನು ಹೇಗೆ ಬಳಸಬೇಕು ಎಂಬುದಕ್ಕೆ ಗಾಂಧೀಜಿ ದೊಡ್ಡ ನಿದರ್ಶನವಾಗಿದ್ದು, ಇಂದಿನ ಸಾರ್ವಜನಿಕ ಜೀವನದಲ್ಲಿ ಇರುವವರಿಗೆ ಅದು ಅನುಕರಣೀಯ ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ ಹೇಳಿದರು.

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ ಮಂಗಳವಾರ ವಿವಿಯ ಸಭಾಂಗಣದಲ್ಲಿ ಆಯೋಜಿಸಿದ್ದ 'ಮಹಾತ್ಮ ಗಾಂಧೀಜಿ ಅವರ ತಾತ್ವಿಕ ಚಿಂತನೆಗಳು' ವಿಶೇಷ ಉಪನ್ಯಾಸ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದ ಅವರು, ಗಾಂಧೀಜಿ ಅವರು ಸತ್ಯ, ಅಹಿಂಸೆ, ಸತ್ಯಾಗ್ರಹ ಹಾಗೂ ಸರ್ವೋದಯ ತತ್ವಗಳಿಗೆ ಬದ್ಧರಾಗಿ ಬದುಕಿ ತೋರಿಸಿದರು. ಸತ್ಯ ಶೋಧನೆಯ ಮೂಲಕ ಸತ್ಯಾಗ್ರಹಕ್ಕೆ ತಾತ್ವಿಕ ನೆಲೆ ಒದಗಿಸಿದರು. ರಕ್ತ ಚೆಲ್ಲದೆ ದೇಶಕ್ಕೆ ಸ್ವಾತಂತ್ರ್ಯ ದೊರಕಿಸಿಕೊಟ್ಟ ಜಗತ್ತಿನ ಏಕೈಕ ವ್ಯಕ್ತಿ ಗಾಂಧಿ. ಸತ್ಯ ಮತ್ತು ಅಹಿಂಸೆ ಎತ್ತಿ ಹಿಡಿಯಲು 2329 ದಿನಗಳ ಕಾಲ ಜೈಲುವಾಸ ಅನುಭವಿಸಿ, 142 ದಿನ ಉಪವಾಸ ಸತ್ಯಾಗ್ರಹ ಮಾಡಿದರು. ಅವರು ಎಂದಿಗೂ ಬ್ರಿಟಿಷರನ್ನು ದ್ವೇಷಿಸಲಿಲ್ಲ, ಬದಲಾಗಿ ಅವರ ನೀತಿಗಳನ್ನು ವಿರೋಧಿಸಿದರು ತಿಳಿಸಿದರು.

ಇಂದಿಗೂ ಭ್ರಷ್ಟಾಚಾರ, ಜಾತೀಯತೆ, ಭಯೋತ್ಪಾದನೆಯಂತಹ ಪಿಡುಗುಗಳು ಹೆಚ್ಚಾಗಿವೆ. ಬಡವರು ಮತ್ತಷ್ಟು ಬಡವರು ಹಾಗೂ ಶ್ರೀಮಂತರು ಮತ್ತಷ್ಟು ಶ್ರೀಮಂತರಾಗುತ್ತಿದ್ದಾರೆ. ಹಾಗಾಗಿ ಆಳುವವರು ಬಡವರ, ಹಳ್ಳಿಗಳ, ರೈತರ ಪರ ಚಿಂತಿಸಿ ನೀತಿಗಳನ್ನು ರೂಪಿಸಬೇಕಿದೆ ಎಂದು ಹೇಳಿದರು.

ಮೈಸೂರು ವಿವಿ ಪ್ರಾಚ್ಯವಿದ್ಯಾ ಸಂಶೋಧನಾಲಯದ ನಿರ್ದೇಶಕ ಪ್ರೊ.ಎಸ್.ಶಿವರಾಜಪ್ಪ ಮಾತನಾಡಿ, ಗಾಂಧಿ ಅವರ ಪ್ರಕಾರ ಸ್ವಾವಲಂಬಿಗಳಾಗಿ ಶೋಷಣೆ ರಹಿತವಾಗಿ ಬದುಕುವುದೇ ಸ್ವಾತಂತ್ರ್ಯ. ಆದರೆ, ಇಂದು ಸ್ವಾತಂತ್ರ್ಯ ವ್ಯಾಖ್ಯಾನ ಬದಲಾಗಿದೆ. ಗಾಂಧೀಜಿ ಅವರು, ಧರ್ಮದ ಮೂಲಕ ಸಂಸ್ಕೃತಿ ಬೆಳೆಯಬೇಕು ಎಂದು ಪ್ರತಿಪಾದಿಸಿದ್ದರು. ಅವರ ಚಿಂತನೆ ಮತ್ತು ತತ್ವಗಳು ಎಲ್ಲ ಕಾಲಕ್ಕೂ ಪ್ರಸ್ತುತ ಎಂದು ಅಭಿಪ್ರಾಯಪಟ್ಟರು.

ಕರ್ನಾಟಕ ಸಂಸ್ಕೃತಿ ವಿಶ್ವವಿದ್ಯಾಲಯದ ಕುಲಪತಿ ಪ್ರೊ.ಪದ್ಮಾಶೇಖರ್, ಪ್ರೊ.ಗಿರೀಶ್, ಡಾ.ವಿನಯ್ ಮತ್ತಿತರರು ಉಪಸ್ಥಿತರಿದ್ದರು.

ಉದಯವಾಣಿ
ಬುಧವಾರ, ಅಕ್ಟೋಬರ್ 31, 2018

# ಇಂದಿನ ಆಮಂತ್ರಣ

■ ನಾರ್ಥ್ ಬೆಂಗಳೂರು ಎಜುಕೇಷನಲ್ ಟ್ರಸ್ಟ್: ಭಾರತ ರತ್ನ ಸರ್.ಎಂ.ವಿಶ್ವೇಶ್ವರಯ್ಯನವರ ಪುತ್ಥಳಿ ಅನಾವರಣ. ಉದ್ಘಾಟಕರು: ಕರ್ನಾಟಕ ಗಾಂಧೀಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ. ಪುತ್ಥಳಿ ಅನಾವರಣ: ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಡಾ.ಮನು ಬಳಿಗಾರ್. ಸ್ಥಳ: ಎಂಎನ್‌ಟಿಐ ಕಾಲೇಜು ಆವರಣ. ಬೆಳಗ್ಗೆ 11.



ಕನ್ನಡಪ್ರಭ
ಬುಧವಾರ 31.10.2018



▫ ನಾರ್ಥ್ ಬೆಂಗಳೂರು ಎಜುಕೇಷನಲ್ ಟ್ರಸ್ಟ್: ಭಾರತ ರತ್ನ ಸರ್.ಎಂ. ವಿಶ್ವೇಶ್ವರಯ್ಯನವರ ಪುತ್ಥಳಿ ಅನಾವರಣ- ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಡಾ.ಮನು ಬಳಿಗಾರ್, ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ಟ್ರಸ್ಟ್ ಕಾರ್ಯದರ್ಶಿ ಡಾ. ವೂಡೆ ಪಿ.ಕೃಷ್ಣ, ಅಧ್ಯಕ್ಷತೆ- ನಾರ್ಥ್ ಬೆಂಗಳೂರು ಎಜುಕೇಷನಲ್ ಟ್ರಸ್ಟ್ ಅಧ್ಯಕ್ಷ ಬಿ.ಟಿ.ರಾಜಶೇಖರನ್, ಕಾಲೇಜಿನ ಆವರಣ, ಕಮ್ಮಗೊಂಡನಹಳ್ಳಿ, ಬೆಳಗ್ಗೆ 11.

# ಮಹಾತ್ಮ ಗಾಂಧೀಜಿ ಶುದ್ಧತೆಯ ಪ್ರತೀಕ

## ಸತ್ಯ, ಅಹಿಂಸೆ, ಸರ್ವೋದಯ ತತ್ವಕ್ಕೆ ಬದ್ಧ ಜೀವನ

## ಸತ್ಯಾಗ್ರಹಕ್ಕೆ ತಾತ್ವಿಕ ನೆಲೆ ಕೊಟ್ಟ ಮಹಾತ್ಮ: ಪಿ.ಕೃಷ್ಣ



ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ ಮಂಗಳವಾರ ಆಯೋಜಿಸಿದ್ದ 'ಮಹಾತ್ಮ ಗಾಂಧೀಜಿ ಅವರ ತಾತ್ವಿಕ ಚಿಂತನೆಗಳು' ವಿಶೇಷ ಉಪನ್ಯಾಸ ಕಾರ್ಯಕ್ರಮವನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ ಉದ್ಘಾಟಿಸಿದರು. ಕುಲಪತಿ ಪ್ರೊ.ಪದ್ಮಾ ಶೇಖರ್, ಪ್ರೊ.ಎಸ್.ಶಿವರಾಜಪ್ಪ ಮತ್ತಿತರರಿದ್ದಾರೆ.

• ಕನ್ನಡಪ್ರಭ ವಾರ್ತೆ ಬೆಂಗಳೂರು

ಸಾರ್ವಜನಿಕ ಜೀವನದಲ್ಲಿರುವ ವ್ಯಕ್ತಿ ಹೇಗಿರಬೇಕು ಮತ್ತು ಸಾರ್ವಜನಿಕ ಹಣವನ್ನು ಹೇಗೆ ಬಳಸಬೇಕು ಎಂಬುದಕ್ಕೆ ಗಾಂಧೀಜಿ ದೊಡ್ಡ ನಿದರ್ಶನವಾಗಿದ್ದು, ಇಂದಿನ ಸಾರ್ವಜನಿಕ ಜೀವನದಲ್ಲಿ ಇರುವವರಿಗೆ ಅದು ಅನುಕರಣೀಯ ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ ಹೇಳಿದರು.

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ ಮಂಗಳವಾರ ವಿವಿಯ ಸಭಾಂಗಣದಲ್ಲಿ ಆಯೋಜಿಸಿದ್ದ 'ಮಹಾತ್ಮ ಗಾಂಧೀಜಿ ಅವರ ತಾತ್ವಿಕ ಚಿಂತನೆಗಳು' ವಿಶೇಷ ಉಪನ್ಯಾಸ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದ ಅವರು, ಗಾಂಧೀಜಿ ಅವರು ಸತ್ಯ, ಅಹಿಂಸೆ, ಸತ್ಯಾಗ್ರಹ ಹಾಗೂ ಸರ್ವೋದಯ ತತ್ವಗಳಿಗೆ ಬದ್ಧರಾಗಿ ಬದುಕಿ ತೋರಿಸಿದರು. ಸತ್ಯಶೋಧನೆಯ ಮೂಲಕ ಸತ್ಯಾಗ್ರಹಕ್ಕೆ ತಾತ್ವಿಕ ನೆಲೆ ಒದಗಿಸಿದರು. ರಕ್ತ ಚೆಲ್ಲದೆ ದೇಶಕ್ಕೆ ಸ್ವಾತಂತ್ರ್ಯ ದೊರಕಿಸಿಕೊಟ್ಟ ಜಗತ್ತಿನ ಏಕೈಕ ವ್ಯಕ್ತಿ ಗಾಂಧಿ. ಸತ್ಯ ಮತ್ತು ಅಹಿಂಸೆ ಎತ್ತಿ ಹಿಡಿಯಲು 2329 ದಿನಗಳ ಕಾಲ ಜೈಲುವಾಸ ಅನುಭವಿಸಿ, 142 ದಿನ ಉಪವಾಸ ಸತ್ಯಾಗ್ರಹ ಮಾಡಿದರು. ಅವರು ಎಂದಿಗೂ ಬ್ರಿಟಿಷರನ್ನು ದ್ವೇಷಿಸಲಿಲ್ಲ, ಬದಲಾಗಿ ಅವರ ನೀತಿಗಳನ್ನು ವಿರೋಧಿಸಿದರು ತಿಳಿಸಿದರು.

ಇಂದಿಗೂ ಭ್ರಷ್ಟಾಚಾರ, ಜಾತೀಯತೆ, ಭಯೋತ್ಪಾದನೆಯಂತಹ ಪಿಡುಗುಗಳು ಹೆಚ್ಚಾಗಿವೆ. ಬಡವರು ಮತ್ತಷ್ಟು ಬಡವರು ಹಾಗೂ ಶ್ರೀಮಂತರು ಮತ್ತಷ್ಟು ಶ್ರೀಮಂತರಾಗುತ್ತಿದ್ದಾರೆ. ಹಾಗಾಗಿ ಆಳುವವರು ಬಡವರ, ಹಳ್ಳಿಗಳ, ರೈತರ ಪರ ಚಿಂತಿಸಿ ನೀತಿಗಳನ್ನು ರೂಪಿಸಬೇಕಿದೆ ಎಂದು ಹೇಳಿದರು.

ಮೈಸೂರು ವಿವಿ ಪ್ರಾಚ್ಯವಿದ್ಯಾ ಸಂಶೋಧನಾಲಯದ ನಿರ್ದೇಶಕ ಪ್ರೊ.ಎಸ್.ಶಿವರಾಜಪ್ಪ ಮಾತನಾಡಿ, ಗಾಂಧಿ ಅವರ ಪ್ರಕಾರ ಸ್ವಾವಲಂಬಿಗಳಾಗಿ ಶೋಷಣೆ ರಹಿತವಾಗಿ ಬದುಕುವುದೇ ಸ್ವಾತಂತ್ರ್ಯ. ಆದರೆ, ಇಂದು ಸ್ವಾತಂತ್ರ್ಯ ವ್ಯಾಖ್ಯಾನ ಬದಲಾಗಿದೆ. ಗಾಂಧೀಜಿ ಅವರು, ಧರ್ಮದ ಮೂಲಕ ಸಂಸ್ಕೃತಿ ಬೆಳೆಯಬೇಕು ಎಂದು ಪ್ರತಿಪಾದಿಸಿದ್ದರು. ಅವರ ಚಿಂತನೆ ಮತ್ತು ತತ್ವಗಳು ಎಲ್ಲ ಕಾಲಕ್ಕೂ ಪ್ರಸ್ತುತ ಎಂದು ಅಭಿಪ್ರಾಯಪಟ್ಟರು.

ಕರ್ನಾಟಕ ಸಂಸ್ಕೃತಿ ವಿಶ್ವವಿದ್ಯಾಲಯದ ಕುಲಪತಿ ಪ್ರೊ.ಪದ್ಮಾಶೇಖರ್, ಪ್ರೊ.ಗಿರೀಶ್, ಡಾ.ವಿನಯ್ ಮತ್ತಿತರರು ಉಪಸ್ಥಿತರಿದ್ದರು.

[redacted]

# ಗಾಂಧೀಜಿಗಿತ್ತು ತಾತ್ವಿಕ ಒಳನೋಟ



• ದಿಗಂತ ವರದಿ, ಬೆಂಗಳೂರು

ಗಾಂಧೀಜಿ ಅವರು ತಾತ್ವಿಕ ಹೊರನೋಟ ಮತ್ತು ಒಳನೋಟ ಹೊಂದಿದ್ದರು ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಹೇಳಿದರು.

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದಲ್ಲಿ ಮಂಗಳವಾರ 'ಗಾಂಧೀಜಿ ಅವರ ತಾತ್ವಿಕ ಚಿಂತನೆಗಳು' ಎಂಬ ವಿಷಯದ ಬಗ್ಗೆ ವಿಶೇಷ ವಿಚಾರ ಸಂಕಿರಣದಲ್ಲಿ ಮಾತನಾಡಿದ ಅವರು, ಅಹಿಂಸಾತ್ಮಕ ಮತ್ತು ಸಮುದಾಯಾತ್ಮಕ ಸಮಾಜದ ಕಲ್ಪನೆ ಹೊಂದಿದ್ದರು. ಸತ್ಯ, ಅಹಿಂಸೆ, ಸತ್ಯಾಗ್ರಹ, ಸರ್ವೋದಯ ಎಂಬ ಈ ನಾಲ್ಕು ಸ್ತಂಭಗಳನ್ನು ಅವರು ಅವಲಂಬಿಸಿದ್ದರು ಎಂದರು. ಗಾಂಧೀಜಿ ಅವರ ಆಶಯಗಳು ಇಂದಿಗೂ ಪ್ರಸ್ತುತವಾಗಿದ್ದು, ಕೋಮುಸೌಹಾರ್ದ, ಅಸ್ಪೃಶ್ಯತೆ ನಿವಾರಣೆ, ಸ್ವದೇಶಿ ಭಾವನೆ ಮುಂತಾದ ತತ್ವ ಅವರು ಆಗಲೇ ಪ್ರತಿಪಾದಿಸಿದ್ದರು. ದೋಷವಿಲ್ಲದ ಮನಸ್ಸಿನಿಂದ ಮಾತ್ರ ಯಾವುದೇ ಸಾಧನೆ ಮಾಡಲು ಸಾಧ್ಯ. ಗಾಂಧೀಜಿ ಅವರು ಜಾಗತಿಕ ನಾಯಕರು ಎಂದರು.

ಸಂಸ್ಕೃತ ವಿವಿ ಕುಲಪತಿ ಪ್ರೊ. ಪದ್ಮಾಶೇಖರ್, ಚಂದನಾ ಗಿರೀಶ್ ಹೆಗಡೆ, ವಿವಿಧ ಭಾಷಾ ನಿಕಾಯದ ಡೀನ್ ಪ್ರೊ. ಗಿರೀಶ್ ಚಂದ್ರ, ಉಪಕುಲಸಚಿವ ಪ್ರಕಾಶ್ ಉಪಸ್ಥಿತರಿದ್ದರು.



>> ಉಪನ್ಯಾಸ: ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ ಆಯೋಜನೆ. 'ಮಹಾತ್ಮಾ ಗಾಂಧಿ ಅವರ ತಾತ್ವಿ ಚಿಂತನೆಗಳು' ಕುರಿತಾಗಿ ವಿಶೇಷೋಪನ್ಯಾಸ ಉದ್ಘಾಟನೆ: ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯ ಡಾ.ವೂಡೇ ಪಿ. ಕೃಷ್ಣ. ದಿಕ್ಸೂಚಿ ಭಾಷಣ: ಮೈಸೂರ ವಿವಿ ಪ್ರಾಚ್ಯವಸ್ತು ಸಂಶೋಧನಾಲಯದ ನಿರ್ದೇಶ ಡಾ.ಎಸ್. ಶಿವರಾಜಪ್ಪ. ಅಧ್ಯಕ್ಷತೆ: ಕರ್ನಾಟ ಸಂಸ್ಕೃತ ವಿವಿ ಕುಲಪತಿ ಪ್ರೊ. ಪದ್ಮಾ ಶೇಖರ್. ಮಧ್ಯಾಹ್ನ 2ರಿಂದ ವಿಶೇ ಉಪನ್ಯಾಸಗಳು. ವಿಚಾರ ಮಂಡನೆ: ಪ್ರೊ.ಜಿ.ಬಿ. ಶಿವರಾಜು (ಮಹಾತ್ಮಾ ಗಾಂಧಿ ಮತ್ತು ಪ್ರಸ್ತುತತೆ), ಡಾ.ಲೀಲಾ ಅಪ್ಪಾಜಿ (ಮಹಾತ್ಮಾ ಗಾಂಧಿ ಮತ್ತು ಮಹಿಳೆ) ಸ್ಥಳ: ಸಭಾಂಗಣ, ಸಂಸ್ಕೃತ ವಿಶ್ವವಿದ್ಯಾಲಯ, ಮಹಾಕವಿ ಪಂಪ ರಸ್ತೆ ಚಾಮರಾಜಪೇಟೆ. ಬೆಳಗ್ಗೆ 11ಕ್ಕೆ.

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ: ಮಹಾತ್ಮ ಗಾಂಧೀಜಿ ಅವರ ತಾತ್ವಿಕ ಚಿಂತನಗಳು ಕುರಿತು ವಿಶೇಷೋಪನ್ಯಾಸ. ಬೆಳಗ್ಗೆ 11 ಗಂಟೆಗೆ ಡಾ. ಎಸ್. ಶಿವರಾಜಪ್ಪ ಅವರಿಂದ ಉಪನ್ಯಾಸ. ಅಧ್ಯಕ್ಷತೆ: ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ ಕುಲಪತಿ ಪ್ರೊ. ಪದ್ಮಾಶೇಖರ್. ಮಧ್ಯಾಹ್ನ 2ಕ್ಕೆ ಪ್ರೊ. ಜಿ.ಬಿ. ಶಿವರಾಜು ಅವರಿಂದ 'ಮಹಾತ್ಮ ಗಾಂಧೀಜಿ ಮತ್ತು ಪ್ರಸ್ತುತತೆ' ಕುರಿತು, ಡಾ. ಲೀಲಾ ಅಪ್ಪಾಜಿ ಅವರಿಂದ 'ಮಹಾತ್ಮ ಗಾಂಧೀಜಿ ಮತ್ತು ಮಹಿಳೆ' ಕುರಿತು ವಿಶೇಷ ಉಪನ್ಯಾಸ. ಸ್ಥಳ: ಸಭಾಂಗಣ, ಕರ್ನಾಟಕ ಸಂಸ್ಕೃತ ವಿವಿ, ಚಾಮರಾಜಪೇಟೆ.

# ಗಾಂಧಿ ಭವನ ನಿರ್ಮಿಸಲು ಆದ್ಯತೆ : ಸಿಎಂ

ಉದಯಕಾಲ ನ್ಯೂಸ್

ಬೆಂಗಳೂರು: ರಾಜ್ಯದ ಎಲ್ಲ ಜಿಲ್ಲೆಗಳಲ್ಲಿ ಗಾಂಧಿ ಭವನಗಳನ್ನು ಆದ್ಯತೆಯ ಮೇರೆಗೆ ನಿರ್ಮಿಸುವಂತೆ ಮುಖ್ಯಮಂತ್ರಿ ಎಚ್.ಡಿ. ಕುಮಾರಸ್ವಾಮಿ ಸೂಚನೆ ನೀಡಿದರು.

ಅವರು ಇಂದು ತಮ್ಮ ಗೃಹ ಕಚೇರಿ ಕೃಷ್ಣಾದಲ್ಲಿ ಮಹಾತ್ಮಾ ಗಾಂಧೀಜಿಯವರ 150ನೇ ಜನ್ಮ ವರ್ಷಾಚರಣೆ ಕುರಿತು ಚರ್ಚಿಸಲು ಕರೆದಿದ್ದ ಉನ್ನತ ಮಟ್ಟದ ಸಮಿತಿಯ ಸಭೆಯ ಅಧ್ಯಕ್ಷತೆ ವಹಿಸಿ ಮಾತನಾಡಿದರು. ಗಾಂಧಿ ಭವನಕ್ಕೆ 21 ಜಿಲ್ಲೆಗಳಲ್ಲಿ ನಿವೇಶನ ಲಭ್ಯವಿದೆ. ಉಳಿದ ಜಿಲ್ಲೆಗಳಲ್ಲಿ ನಿವೇಶನ ಒದಗಿಸುವಂತೆ ಜಿಲ್ಲಾಧಿಕಾರಿಗಳಿಗೆ ಸೂಚನೆ ನೀಡಲಾಗಿದೆ. ಆದ್ದರಿಂದ ಈ ಕಾರ್ಯಕ್ರಮ ವನ್ನು ಆದ್ಯತೆ ಮೇರೆಗೆ ಕೈಗೆತ್ತಿಕೊಳ್ಳುವಂತೆ ಅಧಿಕಾರಿಗಳಿಗೆ ನಿರ್ದೇಶನ ನೀಡಲಾಗುವುದು ಎಂದರು.

ಗಾಂಧಿ ಭವನ ನಿರ್ಮಿಸಿದ ನಂತರ ಅಲ್ಲಿ ಹಮ್ಮಿಕೊಳ್ಳಬಹುದಾದ ಕಾರ್ಯಕ್ರಮಗಳ ಕುರಿತು ಸಮಿತಿ ಸದಸ್ಯರ ಸಲಹೆಗಳನ್ನು ಆಲಿಸಿದ ಮುಖ್ಯಮಂತ್ರಿಗಳು, ಗಾಂಧಿ ಚಿಂತನೆ, ಆಶಯಗಳಿಗೆ ಅನುಗುಣವಾಗಿ ನಿರಂತರ ಕಾರ್ಯಕ್ರಮವನ್ನು ಏರ್ಪಡಿಸುವಂತೆ ಹಾಗೂ ಗಾಂಧಿಭವನ ನಿರ್ವಹಣೆಗೆ ಅಗತ್ಯ ಕ್ರಮ ವಹಿಸುವಂತೆಯೂ ಸೂಚನೆ ನೀಡಿದರು.

**ಚಲನಚಿತ್ರೋತ್ಸವಕ್ಕೆ ಗಾಂಧಿ ಆಧಾರಿತ ಚಿತ್ರ**

ಈ ಬಾರಿ ಮಹಾತ್ಮಾ ಗಾಂಧಿಯವರನ್ನೇ ಪ್ರಮುಖ ವಿಷಯವಾಗಿಟ್ಟುಕೊಂಡು ಬೆಂಗಳೂರು ಅಂತರರಾಷ್ಟ್ರೀಯ ಚಲನಚಿತ್ರೋತ್ಸವ



ಏರ್ಪಡಿಸುವಂತೆ ತಿಳಿಸಿದರು.

ಭಾರತ ಸರ್ಕಾರವು ಗಣರಾಜ್ಯೋತ್ಸವ ಸ್ತಬ್ಧ ಚಿತ್ರಕ್ಕೆ ಎಲ್ಲ ರಾಜ್ಯಗಳೂ ಗಾಂಧೀಜಿ ಕುರಿತ ಸ್ತಬ್ಧಚಿತ್ರವನ್ನೇ ಪ್ರಸ್ತುತಪಡಿಸುವಂತೆ ಸೂಚಿಸಿದೆ. ಅದರಂತೆ ರಾಜ್ಯದಿಂದ ಗಾಂಧೀಜಿಯವರು ಅಧ್ಯಕ್ಷತೆ ವಹಿಸಿದ್ದ ಏಕೈಕ ಕಾಂಗ್ರೆಸ್ ಅಧಿವೇಶನ ಎಂಬ ಹೆಗ್ಗಳಿಕೆಯ ಬೆಳಗಾವಿ ಕಾಂಗ್ರೆಸ್ ಅಧಿವೇಶನವನ್ನು ವಿಷಯವಾಗಿಟ್ಟುಕೊಂಡು ಸ್ತಬ್ಧಚಿತ್ರ ಸಿದ್ಧಪಡಿಸಲಾಗುವುದು ಎಂದು ತಿಳಿಸಿದರು.

ಇದಲ್ಲದೆ ಶಾಲೆ, ಕಾಲೇಜುಗಳಲ್ಲಿ ಗಾಂಧೀಜಿ ಹಾಗೂ ಅವರ ವಿಚಾರಧಾರೆ ಕುರಿತ ವಿವಿಧ ಸ್ಪರ್ಧೆಗಳು, ವಿಶ್ವವಿದ್ಯಾಲಯಗಳಲ್ಲಿ ವಿಚಾರಸಂಕಿರಣಗಳು, ಗಾಂಧೀಜಿ, ಅವರ ಹೋರಾಟ,ಅವರ ಒಡನಾಡಿಗಳು, ಸ್ವಾತಂತ್ರ್ಯ ಹೋರಾಟಕ್ಕೆ ಕರ್ನಾಟಕದ ಕೊಡುಗೆ, ಕರ್ನಾಟಕದಲ್ಲಿ ನಡೆದ ಸತ್ಯಾಗ್ರಹಗಳ ದಾಖಲೀಕರಣ ಹೀಗೆ ವಿವಿಧ ವಿಷಯಗಳ ಕುರಿತು ಕಿರುಹೊತ್ತಿಗೆಗಳನ್ನು ಪ್ರಕಟಿಸಲು ಸಮಿತಿಯು ತೀರ್ಮಾನಿಸಿತು.

ಸಾರ್ವಜನಿಕರನ್ನು ಸಕ್ರಿಯವಾಗಿ ತೊಡಗಿಸಿಕೊಂಡು ಈ ಕಾರ್ಯಕ್ರಮಗಳನ್ನು ಅರ್ಥಪೂರ್ಣವಾಗಿ ಏರ್ಪಡಿಸುವಂತೆ ಮುಖ್ಯಮಂತ್ರಿಗಳು ಅಧಿಕಾರಿಗಳಿಗೆ ಸೂಚನೆ ನೀಡಿದರು.

ಸಭೆಯಲ್ಲಿ ಸಮಿತಿಯ ಸದಸ್ಯ ಎಚ್.ಎಸ್. ದೊರೆಸ್ವಾಮಿ, ಚನ್ನಮ್ಮಾ ಹಳ್ಳಿಕೇರಿ, ವೂಡೆ ಪಿ. ಕೃಷ್ಣ, ಶಿವರಾವ್, ಗ್ರಾಮೀಣಾಭಿವೃದ್ಧಿ ಇಲಾಖೆ ಪ್ರಧಾನ ಕಾರ್ಯದರ್ಶಿ ಎಲ್.ಕೆ. ಅತೀಕ್ ಇದ್ದರು.

ಕನ್ನಡಪ್ರಭ
ಬುಧವಾರ 10.10.2018

# ಎಲ್ಲಾ ಜಿಲ್ಲೆಗಳಲ್ಲಿ ಗಾಂಧಿ ಭವನ ನಿರ್ಮಾಣಕ್ಕೆ ಆದ್ಯತೆ

## 21 ಜಿಲ್ಲೆಗಳಲ್ಲಿ ಭವನಕ್ಕೆ ನಿವೇಶನ ಲಭ್ಯ: ಸಿಎಂ

## ಭವನ ನಿರ್ಮಾಣಕ್ಕೆ ಜಿಲ್ಲಾಧಿಕಾರಿಗಳಿಗೆ ಸೂಚನೆ



ಗೃಹ ಕಚೇರಿ ಕೃಷ್ಣಾದಲ್ಲಿ ಮಹಾತ್ಮಾ ಗಾಂಧೀಜಿ ಅವರ 150ನೇ ಜನ್ಮ ವರ್ಷಾಚರಣೆ ಸಂಬಂಧ ಮಂಗಳವಾರ ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಸಮಿತಿಯ ಸಭೆ ನಡೆಯಿತು.

• ಕನ್ನಡಪ್ರಭ ವಾರ್ತೆ ಬೆಂಗಳೂರು

ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಗಾಂಧಿ ಭವನಗಳನ್ನು ಆದ್ಯತೆಯ ಮೇರೆಗೆ ನಿರ್ಮಿಸುವಂತೆ ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ಸೂಚನೆ ನೀಡಿದ್ದಾರೆ.

ಮಂಗಳವಾರ ಗೃಹ ಕಚೇರಿ ಕೃಷ್ಣಾದಲ್ಲಿ ಮಹಾತ್ಮಾ ಗಾಂಧೀಜಿ ಅವರ 150ನೇ ಜನ್ಮ ವರ್ಷಾಚರಣೆ ಸಂಬಂಧ ನಡೆದ ಉನ್ನತ ಮಟ್ಟದ ಸಮಿತಿಯ ಸಭೆಯಲ್ಲಿ ಮಾತನಾಡಿದ ಅವರು, ಗಾಂಧಿ ಭವನಕ್ಕೆ 21 ಜಿಲ್ಲೆಗಳಲ್ಲಿ ನಿವೇಶನ ಲಭ್ಯವಿದೆ. ಉಳಿದ ಜಿಲ್ಲೆಗಳಲ್ಲಿ ನಿವೇಶನ ಒದಗಿಸುವಂತೆ ಜಿಲ್ಲಾಧಿಕಾರಿಗಳಿಗೆ ಸೂಚನೆ ನೀಡಲಾಗಿದೆ. ಆದ್ದರಿಂದ ಈ ಕಾರ್ಯಕ್ರಮವನ್ನು ಆದ್ಯತೆ ಮೇರೆಗೆ ಕೈಗೆತ್ತಿಕೊಳ್ಳುವಂತೆ ಅಧಿಕಾರಿಗಳಿಗೆ ನಿರ್ದೇಶನ ನೀಡಿದರು.

ಗಾಂಧಿ ಚಿಂತನೆ, ಆಶಯಗಳಿಗೆ ಅನುಗುಣವಾಗಿ ನಿರಂತರವಾಗಿ ಕಾರ್ಯಕ್ರಮಗಳನ್ನು ಗಾಂಧಿ ಭವನದಲ್ಲಿ ಏರ್ಪಡಿಸಬೇಕು. ಗಾಂಧಿಭವನ ನಿರ್ವಹಣೆಗೆ ಅಗತ್ಯ ಕ್ರಮ ವಹಿಸಬೇಕು. ಈ ಬಾರಿ ಮಹಾತ್ಮಾಗಾಂಧಿ ಅವರನ್ನೇ ಪ್ರಮುಖ ವಿಷಯವಾಗಿಟ್ಟುಕೊಂಡು ಬೆಂಗಳೂರು ಅಂತಾರಾಷ್ಟ್ರೀಯ ಚಲನಚಿತ್ರೋತ್ಸವ ಏರ್ಪಡಿಸುವಂತೆ ಸೂಚಿಸಲಾಗಿದೆ. ಅಲ್ಲದೇ, ಕೇಂದ್ರ ಸರ್ಕಾರವು ಗಣ ರಾಜ್ಯೋತ್ಸವ ಸ್ತಬ್ಧ ಚಿತ್ರಕ್ಕೆ ಎಲ್ಲ ರಾಜ್ಯಗಳೂ ಗಾಂಧೀಜಿ ಕುರಿತ ಸ್ತಬ್ಧಚಿತ್ರವನ್ನೇ ಪ್ರಸ್ತುತಪಡಿಸುವಂತೆ ಸೂಚಿಸಿದೆ. ಅದರಂತೆ. ರಾಜ್ಯದಿಂದ ಗಾಂಧೀಜಿಯವರು ಅಧ್ಯಕ್ಷತೆ ವಹಿಸಿದ್ದ ಏಕೈಕ ಕಾಂಗ್ರೆಸ್ ಅಧಿವೇಶನ ಎಂಬ ಹೆಗ್ಗಳಿಕೆಯ ಬೆಳಗಾವಿ ಕಾಂಗ್ರೆಸ್ ಅಧಿವೇಶನವನ್ನು ವಿಷಯವಾಗಿಟ್ಟುಕೊಂಡು ಸ್ತಬ್ಧಚಿತ್ರ ಸಿದ್ಧಪಡಿಸಲಾಗುವುದು ಎಂದರು.

ಶಾಲೆ-ಕಾಲೇಜುಗಳಲ್ಲಿ ಗಾಂಧೀಜಿ ಮತ್ತು ಅವರ ವಿಚಾರಧಾರೆ ಕುರಿತ ವಿವಿಧ ಸ್ಪರ್ಧೆಗಳು, ವಿಶ್ವವಿದ್ಯಾಲಯಗಳಲ್ಲಿ ವಿಚಾರ ಸಂಕಿರಣಗಳು, ಗಾಂಧೀಜಿ ಅವರ ಹೋರಾಟ, ಒಡನಾಡಿಗಳು, ಸ್ವಾತಂತ್ರ್ಯ ಹೋರಾಟಕ್ಕೆ ರಾಜ್ಯದ ಕೊಡುಗೆ, ರಾಜ್ಯದಲ್ಲಿ ನಡೆದ ಸತ್ಯಾಗ್ರಹಗಳ ದಾಖಲೀಕರಣ ಹೀಗೆ ವಿವಿಧ ವಿಷಯಗಳ ಕುರಿತು ಕಿರುಹೊತ್ತಿಗೆಗಳನ್ನು ಪ್ರಕಟಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಸಾರ್ವಜನಿಕರನ್ನು ಸಕ್ರಿಯವಾಗಿ ತೊಡಗಿಸಿಕೊಂಡು ಕಾರ್ಯಕ್ರಮಗಳನ್ನು ಅರ್ಥಪೂರ್ಣವಾಗಿ ಏರ್ಪಡಿಸುವಂತೆ ಅಧಿಕಾರಿಗಳಿಗೆ ಸೂಚಿಸಲಾಯಿತು.

ಗಾಂಧಿ ಜಯಂತಿ ಆಚರಣೆಗೆ ನೋಡಲ್ ಇಲಾಖೆಯಾಗಿರುವ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಯೋಗದೊಂದಿಗೆ ರಾಜ್ಯಾದ್ಯಂತ ಹಮ್ಮಿಕೊಂಡಿರುವ ರಂಗ ಪಯಣ ಕಾರ್ಯಕ್ರಮವು ಜನ ಮೆಚ್ಚುಗೆ ಗಳಿಸಿರುವುದನ್ನು ಶ್ಲಾಘಿಸಲಾಯಿತು.

ಸಭೆಯಲ್ಲಿ ಸಮಿತಿಯ ಸದಸ್ಯರಾದ ಸ್ವಾತಂತ್ರ್ಯ ಹೋರಾಟಗಾರರ ಎಚ್.ಎಸ್.ದೊರೆಸ್ವಾಮಿ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ.ಕೃಷ್ಣ, ಉಪಾಧ್ಯಕ್ಷ ಶಿವರಾಜ್, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ನಿರ್ದೇಶಕ ವಿಶುಕುಮಾರ್ ಇತರರು ಉಪಸ್ಥಿತರಿದ್ದರು.

ಹೊಸ ದಿಗಂತ
ಬುಧವಾರ, 10 ಅಕ್ಟೋಬರ್ 2018, ಬೆಂಗಳೂರು

## ಅಧಿಕಾರಿಗಳಿಗೆ ಸೂಚಿಸಿದ ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ

# ಗಾಂಧಿ ಕುರಿತ ಅಂತಾರಾಷ್ಟ್ರೀಯ ಚಿತ್ರೋತ್ಸವ

**ಬೆಂಗಳೂರು:** ಗಾಂಧೀಜಿ ಅವರನ್ನೇ ಪ್ರಮುಖ ವಿಷಯವಾಗಿಟ್ಟುಕೊಂಡು ಬೆಂಗಳೂರು ಅಂತಾರಾಷ್ಟ್ರೀಯ ಚಲನಚಿತ್ರೋತ್ಸವ ಏರ್ಪಡಿಸುವಂತೆ ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ಅವರು ಅಧಿಕಾರಿಗಳಿಗೆ,ಸೂಚನೆ ನೀಡಿದರು.

ಗೃಹ ಕಚೇರಿ ಕೃಷ್ಣಾದಲ್ಲಿ ಮಂಗಳವಾರ ಮಹಾತ್ಮಾ ಗಾಂಧೀಜಿ ಅವರ 150ನೇ ಜನ್ಮ ವರ್ಷಾಚರಣೆ ಕುರಿತು ಚರ್ಚಿಸಲು ಕರೆದಿದ್ದ ಉನ್ನತ ಮಟ್ಟದ ಸಮಿತಿ ಸಭೆಯಲ್ಲಿ ಮಾತನಾಡಿದ ಅವರು, ಗಾಂಧಿ ಚಿಂತನೆ, ಆಶಯಗಳಿಗೆ ಅನುಗುಣವಾಗಿ ನಿರಂತರ ಕಾರ್ಯಕ್ರಮ ಏರ್ಪಡಿಸಬೇಕು. ರಾಜ್ಯದ ಎಲ್ಲ ಜಿಲ್ಲೆಗಳಲ್ಲಿ ಆದ್ಯತೆಯ ಮೇರೆಗೆ ಗಾಂಧಿಭವನ ನಿರ್ಮಿಸಬೇಕು ಎಂದರು.

ಗಾಂಧಿ ಭವನಕ್ಕೆ 21 ಜಿಲ್ಲೆಗಳಲ್ಲಿ ನಿವೇಶನ ಲಭ್ಯವಿದೆ. ಉಳಿದ ಜಿಲ್ಲೆಗಳಲ್ಲಿ ನಿವೇಶನ ಒದಗಿಸುವಂತೆ ಜಿಲ್ಲಾಧಿಕಾರಿಗಳಿಗೆ ಸೂಚನೆ ನೀಡಲಾಗಿದೆ. ಆದ್ದರಿಂದ ಆದ್ಯತೆ ಮೇರೆಗೆ ಭವನ ನಿರ್ಮಾಣ ಕಾರ್ಯ ಕೈಗೆತ್ತಿಕೊಳ್ಳುವಂತೆ ಅಧಿಕಾರಿಗಳಿಗೆ ತಿಳಿಸಲಾಗಿದೆ ಎಂದರು.

ಸ್ತಬ್ಧಚಿತ್ರ ಸಿದ್ಧಪಡಿಸಲು ಸೂಚನೆ:

ಭಾರತ ಸರ್ಕಾರ ಗಣರಾಜ್ಯೋತ್ಸವ ಸ್ತಬ್ಧಚಿತ್ರಕ್ಕೆ ಎಲ್ಲ ರಾಜ್ಯಗಳೂ ಗಾಂಧೀಜಿ ಕುರಿತ ಸ್ತಬ್ಧಚಿತ್ರ ಪ್ರಸ್ತುತಪಡಿಸುವಂತೆ ಸೂಚಿಸಿದೆ. ಅದರಂತೆ ರಾಜ್ಯದಿಂದ ಗಾಂಧೀಜಿ ಅವರು ಅಧ್ಯಕ್ಷತೆ ವಹಿಸಿದ್ದ ಏಕೈಕ ಕಾಂಗ್ರೆಸ್ ಅಧಿವೇಶನ ಎಂಬ ಹೆಗ್ಗಳಿಕೆಯ ಬೆಳಗಾವಿ ಕಾಂಗ್ರೆಸ್ ಅಧಿವೇಶನ ವಿಷಯವಾಗಿಟ್ಟುಕೊಂಡು ಸ್ತಬ್ಧಚಿತ್ರ ಸಿದ್ಧಪಡಿಸಲು ಸಿಎಂ ತಿಳಿಸಿದರು.

**ಕಿರುಹೊತ್ತಿಗೆ ಪ್ರಕಟಿಸಲು ತೀರ್ಮಾನ:** ಶಾಲೆ, ಕಾಲೇಜುಗಳಲ್ಲಿ ಗಾಂಧೀಜಿ ಹಾಗೂ ಅವರ ವಿಚಾರಧಾರೆ ಕುರಿತ ವಿವಿಧ ಸ್ಪರ್ಧೆಗಳು, ವಿಶ್ವವಿದ್ಯಾಲಯಗಳಲ್ಲಿ ವಿಚಾರ ಸಂಕಿರಣಗಳು, ಗಾಂಧೀಜಿ ಅವರ ಹೋರಾಟ, ಅವರ ಒಡನಾಡಿಗಳು, ಸ್ವಾತಂತ್ರ್ಯ ಹೋರಾಟಕ್ಕೆ ಕರ್ನಾಟಕದ ಕೊಡುಗೆ, ಕರ್ನಾಟಕದಲ್ಲಿ ನಡೆದ ಸತ್ಯಾಗ್ರಹಗಳ ದಾಖಲೀಕರಣ ಹೀಗೆ ವಿವಿಧ ವಿಷಯಗಳ ಕುರಿತು ಕಿರುಹೊತ್ತಿಗೆ ಪ್ರಕಟಿಸಲು ಸಮಿತಿ ತೀರ್ಮಾನಿಸಿತು:

**ರಂಗ ಪಯಣ ಯಶಸ್ವಿ:** ಗಾಂಧಿ ಜಯಂತಿ ಆಚರಣೆಗೆ ನೋಡಲ್ ಇಲಾಖೆಯಾಗಿರುವ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಯೋಗದೊಂದಿಗೆ ರಾಜ್ಯಾದ್ಯಂತ ಹಮ್ಮಿಕೊಂಡಿರುವ ರಂಗ ಪಯಣ ಕಾರ್ಯಕ್ರಮ ಜನಮೆಚ್ಚುಗೆ ಗಳಿಸಿರುವುದನ್ನು ಸಮಿತಿಯ ಸದಸ್ಯರು ಶ್ಲಾಘಿಸಿದರು.



ಸಭೆಯಲ್ಲಿ ಸಮಿತಿ ಸದಸ್ಯೆ ಚನ್ನಮ್ಮಾ ಹಳ್ಳಿಕೇರಿ, ಗಾಂಧಿ ಸ್ಮಾರಕ ನಿಧಿ ಉಪಾಧ್ಯಕ್ಷ ಶಿವರಾಜ್, ಗ್ರಾಮೀಣಾಭಿವೃದ್ಧಿ ಇಲಾಖೆ ಪ್ರಧಾನ ಕಾರ್ಯದರ್ಶಿ ಎಲ್.ಕೆ. ಅತೀಕ್, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ನಿರ್ದೇಶಕ ಎನ್.ಆರ್. ವಿಶುಕುಮಾರ್ ಉಪಸ್ಥಿತರಿದ್ದರು.

> “ ಚಿತ್ರೋತ್ಸವ, ರಂಗಪಯಣ, ನಾಟಕೋತ್ಸವ ಸೇರಿದಂತೆ ವಿವಿಧ ಕಾರ್ಯಕ್ರಮದಲ್ಲಿ ಗಾಂಧೀಜಿ ಅವರ ಆದರ್ಶಗಳನ್ನು ಜನರಿಗೆ ತಿಳಿಸಬೇಕಿದೆ. ಗಾಂಧೀಜಿ ಮೌಲ್ಯಗಳು ಪ್ರಸ್ತುತವಾಗಿದ್ದು, ಪರಿಣಾಮಕಾರಿಯಾಗಿ ಮುಟ್ಟಬೇಕಿದೆ. ಈ ಬಗ್ಗೆ ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ಅವರು ಸಕಾರಾತ್ಮಕವಾಗಿ ಸ್ಪಂದಿಸಿದ್ದಾರೆ.
>
> ■ ವೂಡೆ ಪಿ. ಕೃಷ್ಣ,
> ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ

> “ ಗಾಂಧೀಜಿ ಅವರು ಯಾವತ್ತಿಗೂ ಪ್ರಸ್ತುತರಾಗಿದ್ದಾರೆ. ಗಾಂಧಿ ಅವರನ್ನು ಮರೆಸುವ ಕೆಲಸ ಆಗುತ್ತಿದ್ದು, ಅದು ಆಗಬಾರದು. ಗಾಂಧೀಜಿ ಅವರ 150ನೇ ವರ್ಷದ ಜನ್ಮದಿನ ಅಂಗವಾಗಿ ಸ್ವಾತಂತ್ರ್ಯ ಹೋರಾಟಗಾರರ ಚಿತ್ರಣ ಯುವಕರ ಮುಂದಿಡಬೇಕಿದೆ.
>
> ■ ಎಚ್.ಎಸ್. ದೊರೆಸ್ವಾಮಿ,
> ಸ್ವಾತಂತ್ರ್ಯ ಹೋರಾಟಗಾರ

ಹೊಸ ದಿಗಂತ ಬುಧವಾರ, 3 ಅಕ್ಟೋಬರ್ 2018,



# ಗಾಂಧಿ ಸೇವಾ ಪ್ರಶಸ್ತಿ ಪ್ರದಾನ

ಪ್ಲಾಸ್ಟಿಕ್ ನಿರ್ಮೂಲನೆ, ಮಾಲಿನ್ಯ ನಿಯಂತ್ರಣದ ದೃಷ್ಟಿಯಿಂದ ಗುಡಿ ಕೈಗಾರಿಕೆಗೆ ಹೆಚ್ಚಿನ ಮಹತ್ವ ನೀಡಲು ರಾಜ್ಯ ಸರ್ಕಾರ ನಿರ್ಧರಿಸಿದೆ ಎಂದು ಸಿಎಂ ಎಚ್.ಡಿ. ಕುಮಾರಸ್ವಾಮಿ ಹೇಳಿದರು.

ನಗರದ ರವೀಂದ್ರ ಕಲಾಕ್ಷೇತ್ರದಲ್ಲಿ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಏರ್ಪಡಿಸಿದ್ದ ಮಹಾತ್ಮಾ ಗಾಂಧಿ ಸೇವಾ ಪ್ರಶಸ್ತಿ- ಕರ್ನಾಟಕ 2018 ಪ್ರದಾನ ಮತ್ತು ಗಾಂಧಿ 150 ಕರ್ನಾಟಕ ಅಭಿಯಾನ ಚಾಲನೆ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಗಾಂಧಿ ಚಿಂತಕ ಪ್ರಸನ್ನ ಅವರ ಸಲಹೆಯ ಮೇರೆಗೆ ಗುಡಿ ಕೈಗಾರಿಕೆ ಅಭಿವೃದ್ಧಿಗೆ ಕ್ರಮ ಕೈಗೊಳ್ಳಲಾಗುವುದು. ಕೆಲವೇ ದಿನಗಳಲ್ಲಿ ವಿಧಾನಸೌಧದ ಮೂರನೇ ಮಹಡಿಗೆ ಅವರನ್ನು ಆಹ್ವಾನಿಸಿ ಅವರ ಸಲಹೆಗಳನ್ನು ಗೌರವ ಪೂರ್ವಕವಾಗಿ ಸ್ಮರಣೆ ಮಾಡಲಿದ್ದೇನೆ. ನೇಕಾರರ ಕಷ್ಟವನ್ನು ನಾನು ಅರ್ಥ ಮಾಡಿಕೊಂಡಿದ್ದೇನೆ ಎಂದರು.

ಪ್ರಶಸ್ತಿ ಸಮಿತಿ ಆಯ್ಕೆ ಅಧ್ಯಕ್ಷ ನ್ಯಾ.ವಿ. ಗೋಪಾಲಗೌಡ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ. ಕೃಷ್ಣ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ನಿರ್ದೇಶಕ ವಿಶುಕುಮಾರ್ ಮತ್ತು ಕಾರ್ಯದರ್ಶಿ ಪಂಕಜ್ ಕುಮಾರ್ ಪಾಂಡೆ ಉಪಸ್ಥಿತರಿದ್ದರು. ಮಕ್ಕಳಿಗಾಗಿ ಗಾಂಧೀಜಿಯವರ ಜೀವನ ಚರಿತ್ರೆಯ ಕಾಮಿಕ್ ಪುಸ್ತಕ ಬಾಲರ ಬಾಪೂ ಬಿಡುಗಡೆಗೊಂಡಿತು. ಬೋಳುವಾರು ಮಹಮ್ಮದ್ ಕುಂಞ ಅವರ ಪಾಪು ಗಾಂಧಿ ಗಾಂಧಿ ಬಾಪು ಆದ ಕತೆ ಪುಸ್ತಕ ಲೋಕಾರ್ಪಣೆಗೊಂಡಿತು.

>  ಚರಕ ಕೈಮಗ್ಗದಲ್ಲಿ ಅನೇಕ ಅನಕ್ಷರಸ್ಥ ಮಹಿಳೆಯರು ಕಾರ್ಯ ನಿರ್ವಹಿಸುತ್ತಿದ್ದಾರೆ, ಅವರ ಅಭಿವೃದ್ಧಿಗೆ ಮತ್ತು ಚರಕ ಶ್ರಮಜೀವಿ ಆಶ್ರಮಕ್ಕೆ 5 ಲಕ್ಷ ರೂ. ಬಹುಮಾನದ ನಗದನ್ನು ನೀಡಬಯಸುತ್ತೇನೆ.
>
> ■ ಪ್ರಸನ್ನ, ಪ್ರಶಸ್ತಿ ಪುರಸ್ಕೃತರು

ಪ್ರಶಸ್ತಿ ಸ್ವೀಕರಿಸಿ ಮಾತನಾಡಿದ ಚರಕ ಸಂಸ್ಥೆ ಸಂಸ್ಥಾಪಕ ಪ್ರಸನ್ನ 20 ನೇ ಶತಮಾನ ವಿಜ್ಞಾನವನ್ನು ಮುನ್ನಡೆಸಿದೆ. ಸಮಾನತೆ, ವಿಶ್ವಮಾನವರಾಗುವ ಕನಸನ್ನು ಎತ್ತಿ ಹಿಡಿದಿದೆ. ಆದರೆ ನಾವಿಂದು ವಿಶ್ವ ಮಾನವರಾಗದೇ, ಸಣ್ಣವರಾಗಿರುವುದು ದುರಂತ. ಕೇವಲ ಗಾಂಧಿ ಮಾರ್ಗವನ್ನು ಅನುಸರಿಸಿದರೆ ಇದು ಸಾಧ್ಯ ಎಂದರು.

ಕರ್ನಾಟಕ

ಬುಧವಾರ,3 ಅಕ್ಟೋಬರ್ 2018, ಬೆಂಗಳೂರು

# ಗುಡಿ ಕೈಗಾರಿಕೆ ರಕ್ಷಣೆಗೆ ಹೆಚ್ಚಿನ ನೆರವು: ಕುಮಾರಸ್ವಾಮಿ

**ಬೆಂಗಳೂರು:** ಗಾಂಧಿ ಅವರ ಗ್ರಾಮೋದ್ಯೋಗದ ಆಶಯವನ್ನು ಸಾಕಾರಗೊಳಿಸುವ ನಿಟ್ಟಿನಲ್ಲಿ ನೇಕಾರಿಕೆ ಸೇರಿದಂತೆ ಎಲ್ಲ ಬಗೆಯ ಗುಡಿ ಕೈಗಾರಿಕೆಗಳ ರಕ್ಷಣೆಗೆ ಹೆಚ್ಚಿನ ನೆರವು ನೀಡಲು ಸರಕಾರ ಬದ್ಧವಿದೆ ಎಂದು ಸಿಎಂ ಕುಮಾರಸ್ವಾಮಿ ಭರವಸೆ ನೀಡಿದರು.

ಈ ಸಂಬಂಧ ಸದ್ಯದಲ್ಲೇ ಗುಡಿ ಕೈಗಾರಿಕೆ, ನೇಕಾರರ ರಕ್ಷಣೆಗೆ ಹೋರಾಡುತ್ತಿರುವ ಪ್ರಸನ್ನ ಜತೆ ಚರ್ಚಿಸಿ, ಅವರ ಸಲಹೆಗಳನ್ನು ಅನುಷ್ಠಾನಗೊಳಿಸಲಾಗುವುದು ಎಂದರು. ನಗರದಲ್ಲಿ ನಡೆದ ಕಾರ್ಯಕ್ರಮದಲ್ಲಿ 2018ನೇ ಸಾಲಿನ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ಸ್ವೀಕರಿಸಿ ಮಾತನಾಡಿದ ಪ್ರಸನ್ನ, ''ಸರಕಾರ ಕೈಮಗ್ಗ ಕ್ಷೇತ್ರದಲ್ಲಿ ಗಮನಹರಿಸಬೇಕು. ಕೃಷಿ ನಂತರ ಹೆಚ್ಚಿನ ಉದ್ಯೋಗವಕಾಶ ದೊರಕಿಸಿ ಕೊಡುವ ಕೈಮಗ್ಗ ಉತ್ತರ ಕರ್ನಾಟಕದ ಅಭಿವೃದ್ಧಿಯಲ್ಲಿ ಅತಿದೊಡ್ಡ ಕೊಡುಗೆ ನೀಡಬಲ್ಲದು,'' ಎಂದು ಸಲಹೆ ನೀಡಿದರು.

ಅದಕ್ಕೆ ತಮ್ಮ ಭಾಷಣದಲ್ಲಿ ಸಹಮತ ಸೂಚಿಸಿದ ಸಿಎಂ, ''ನೇಕಾರರ ಸಂಕಷ್ಟವನ್ನು ಹತ್ತಿರದಿಂದ ಬಲ್ಲೆ,



ರಂಗಕರ್ಮಿ ಪ್ರಸನ್ನಗೆ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ಪ್ರದಾನ ಮಾಡಿದ ಸಿಎಂ ಕುಮಾರಸ್ವಾಮಿ.

ಬೆಳಗಾವಿಯಲ್ಲಿ ನೇಕಾರರ ಕುಟುಂಬಗಳು ಆತ್ಮಹತ್ಯೆ ಮಾಡಿಕೊಂಡಿವೆ. ಗುಳೇದಗುಡ್ಡದ ನೇಕಾರರು ಗುಳೆ ಹೋಗುತ್ತಿದ್ದಾರೆ. ಈ ಎಲ್ಲ ಅಂಶಗಳನ್ನು ಮನಗಂಡು ಸಮಾಜದ ಎಲ್ಲ ವರ್ಗದ ಜನರು ನೆಮ್ಮದಿಯ ಜೀವನ ನಡೆಸುವಂತೆ ಮಾಡಲು ಮೈತ್ರಿ ಸರಕಾರ ಕ್ರಮ ಕೈಗೊಳ್ಳಲಿದೆ,'' ಎಂದರು.

**ಮಾದಕ ದ್ರವ್ಯ ತಡೆಗೆ ಕಠಿಣ ನಿರ್ಧಾರ:** ಶಾಲಾ-

> ಅಭಿವೃದ್ಧಿಯ ಹರಿಕಾರ ಎಂದು ಗಾಂಧಿಯನ್ನು ಸ್ವೀಕರಿಸುವ ಕಾಲ ಬಂದಿದೆ. ಬುದ್ಧ ಬಸವರನ್ನೂ ಪಾರಮಾರ್ಥಿಕ ಮಂದಿರಗಳಿಂದ ಬಿಡುಗಡೆಗೊಳಿಸಿ ಅಭಿವೃದ್ಧಿಯ ಹರಿಕಾರರನ್ನಾಗಿ ಸ್ವೀಕರಿಸಬೇಕು.
>
> -**ಪ್ರಸನ್ನ** ರಂಗಕರ್ಮಿ

ಕಾಲೇಜುಗಳ ಬಳಿ ಗಾಂಜಾ ಮತ್ತಿತರರ ಮಾದಕ ವಸ್ತುಗಳ ಮಾರಾಟ ಮಾಡಿ ಹಣದ ದಾಹಕ್ಕೆ ಕೆಲ ವರ್ಗದ ಜನರು ಯುವಜನರ ದಾರಿತಪ್ಪಿಸುತ್ತಿದೆ. ಇದನ್ನು ನಿಯಂತ್ರಿಸಲು ಮುಂದಿನ ದಿನಗಳಲ್ಲಿ ಕೆಲವು ಕಠಿಣ ನಿರ್ಧಾರ ಕೈಗೊಳ್ಳಲಾಗುವುದು ಎಂದು ಕುಮಾರಸ್ವಾಮಿ ಹೇಳಿದರು.

ಸುಪ್ರೀಂ ಕೋರ್ಟ್‌ನ ನಿವೃತ್ತ ನ್ಯಾ. ವಿ. ಗೋಪಾಲಗೌಡ ಮಾತನಾಡಿದರು. ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ ಪಿ.ಕೃಷ್ಣ , ವಾರ್ತಾ ಸಾರ್ವಜನಿಕ ಸಂಪರ್ಕ ಇಲಾಖೆ ಕಾರ್ಯದರ್ಶಿ ಪಂಕಜ್‌ಕುಮಾರ್ ಪಾಂಡೆ, ನಿರ್ದೇಶಕ ಎನ್.ಆರ್. ವಿಶುಕುಮಾರ್ ಮತ್ತಿತರರಿದ್ದರು.

## ಪ್ರತಿ ಜಿಲ್ಲೆಯಲ್ಲೂ ಗಾಂಧಿ ಭವನ

''ಗಾಂಧೀಜಿ ತತ್ತ್ವಗಳನ್ನು ಸರಕಾರ ಅಳವಡಿಸಿಕೊಂಡು ಮುಂದೆ ಸಾಗುತ್ತಿದೆ. ಪ್ರತಿ ಜಿಲ್ಲೆಯಲ್ಲೂ ಗಾಂಧಿ ಭವನ ನಿರ್ಮಿಸುವ ಯೋಜನೆಗೆ ನೆರವು ನೀಡಲಾಗುವುದು. ಇಂಥ ಭವನಗಳಿಂದ ಪ್ರತಿನಿತ್ಯವೂ ಒಂದಲ್ಲಾ ಒಂದು ಕಾರ್ಯಕ್ರಮ ನಡೆಸಿ ಗ್ರಾಮ ಸ್ವರಾಜ್ಯಕ್ಕೆ ಒತ್ತಾಸೆಯಾಗಿ ನಿಲ್ಲಬೇಕು,'' ಎಂದು ಸಿಎಂ ಕುಮಾರಸ್ವಾಮಿ ಸಲಹೆ ನೀಡಿದರು.

ಬೆಂಗಳೂರಿನ ಗಾಂಧಿಭವನದಲ್ಲಿ ಗಾಂಧೀಜಿಯವರ 150ನೇ ವರ್ಷಾಚರಣೆ ಹಾಗೂ ರಾಷ್ಟ್ರೀಯ ಸೇವಾ ಯೋಜನೆ ಸುವರ್ಣ ಸಂಭ್ರಮಕ್ಕೆ ಚಾಲನೆ ನೀಡಿ ಅವರು ಮಂಗಳವಾರ ಮಾತನಾಡಿದರು. ''ಮಹಿಳೆಯೊಬ್ಬಳು ಮಧ್ಯರಾತ್ರಿಯಲ್ಲಿ ನಿರ್ಭಯವಾಗಿ ಓಡಾಡಿದಾಗ ಮಾತ್ರ ನಿಜವಾದ ಸ್ವಾತಂತ್ರ್ಯ ಲಭಿಸಿದೆ ಎಂಬುದಾಗಿ ಗಾಂಧಿಜೀ ಹೇಳಿದ್ದರು. ಅದನ್ನು ಸಮ್ಮಿಶ್ರ ಸರಕಾರ ನನಸು ಮಾಡಲು ಬದ್ಧವಾಗಿದೆ. ರಾಜಧಾನಿಯಲ್ಲಿ ಹೆಣ್ಣು ಮಕ್ಕಳ ರಕ್ಷಣೆಗೆ ವಿಶೇಷ ಆಸ್ಥೆ ವಹಿಸಿದ್ದೇವೆ. ಅಪರಾಧ ಚಟುವಟಿಕೆಯನ್ನು ನಿಯಂತ್ರಿಸಲು ಸಮರ್ಥ ಅಧಿಕಾರಿಗಳನ್ನು ನಿಯೋಜಿಸಲಾಗಿದೆ,'' ಎಂದು ಮುಖ್ಯಮಂತ್ರಿ ಕುಮಾರಸ್ವಾಮಿ ವಿವರಿಸಿದರು.

## ಅನುಮತಿ ನೀಡುವ ನಿರ್ಧಾರ ಅಧಿಕಾರಿಗಳದು, ನನ್ನದಲ್ಲ: ಎಚ್.ಡಿ ಕುಮಾರಸ್ವಾಮಿ

# ಮದ್ಯದಂಗಡಿ ಲೈಸೆನ್ಸ್‌ಗೆ ಸಿಎಂ ಹೊಸ ರಾಗ

**ವಿಕ ಸುದ್ದಿಲೋಕ** ಬೆಂಗಳೂರು

ಸಾರಾಯಿ ನಿಷೇಧ ಮಾಡಿದ ನಾನು ಹೊಸ ಮದ್ಯದಂಗಡಿ ಪರವಾನಗಿಗೆ ಅನುಮತಿ ನೀಡುವ ವ್ಯಕ್ತಿಯಲ್ಲ, ನನಗೆ ಎರಡು ಮುಖವಿದೆ ಎಂಬ ಮಾಧ್ಯಮಗಳ ವರದಿ ಸುಳ್ಳು ಎಂದು ಸಿಎಂ ಕುಮಾರಸ್ವಾಮಿ ತಿಳಿಸಿದರು.

ಗಾಂಧಿಭವನದಲ್ಲಿ ಗಾಂಧೀ ಜಿಯವರ 150ನೇ ವರ್ಷಾಚರಣೆ ಹಾಗೂ ರಾಷ್ಟ್ರೀಯ ಸೇವಾ ಯೋಜನೆ ಸುವರ್ಣ ಸಂಭ್ರಮಕ್ಕೆ ಚಾಲನೆ ನೀಡಿ ಅವರು ಮಂಗಳವಾರ ಮಾತನಾಡಿದರು.

''ನನ್ನನ್ನು ಎರಡು ಮುಖವಿರುವ ವ್ಯಕ್ತಿಯೆಂದು ಮಾಧ್ಯಮ ಬಿಂಬಿಸುತ್ತಿದೆ. ಸಾರಾಯಿ ನಿಷೇಧ ಮಾಡಿದಾತ ಈಗ ಮದ್ಯದ ಪರವಾನಗಿ ನೀಡಲು ಹೊರಟಿದ್ದಾರೆಂದು ಹೇಳಲಾಗುತ್ತದೆ. ಪರವಾನಗಿ ವಿಚಾರದಲ್ಲಿ ನನ್ನ ಪಾತ್ರ ಇಲ್ಲ, ಅದೇನಿದ್ದರೂ ಅಬಕಾರಿ ಇಲಾಖೆಯ ನಿರ್ಧಾರ. ಸದ್ಯಕ್ಕೆ ಹೊಸ ಪರವಾನಗಿ ನೀಡದಂತೆ ಸೂಚಿಸಿರುವೆ,'' ಎಂದರು.

ರಾಜ್ಯದಲ್ಲಿ ಹೊಸ ಮದ್ಯದಂಗಡಿ ತೆರೆಯುವ ಸಂಬಂಧ ಅಬಕಾರಿ ಇಲಾಖೆಯು ಎಲ್ಲ ಜಿಲ್ಲಾ ಉಪನಿರ್ದೇಶಕರಿಗೂ ಸುತ್ತೋಲೆ ಹೊರಡಿಸಿ, 2011ರ ಜನಸಂಖ್ಯೆಗೆ ಅನುಗುಣವಾಗಿ ತಾಲೂಕುವಾರು ಬೇಡಿಕೆ ಇರುವ ಮದ್ಯದಂಗಡಿ ಕುರಿತು ಪಟ್ಟಿ ನೀಡುವಂತೆ ಕೋರಲಾಗಿತ್ತು. ಈ ಸುತ್ತೋಲೆ ಸಹಿತ ವಿಜಯ ಕರ್ನಾಟಕವು ಸೆ.26 ರಂದು ಮುಖಪುಟದಲ್ಲಿ ವಿಶೇಷ ವರದಿ ಪ್ರಕಟಿಸಿತ್ತು. ವರದಿಗೆ ಪ್ರತಿಕ್ರಿಯೆ ನೀಡಿದ್ದ ಮುಖ್ಯಮಂತ್ರಿಗಳು, ''ಆ ಇಲಾಖೆ ನನ್ನ ಬಳಿಯೇ ಇದೆ. ಮಾಧ್ಯಮಗಳಲ್ಲಿ ವರದಿಯಾಗಿರುವ ಹಾಗೆ ನಮ್ಮ ಸರಕಾರ ಬಂದ ಬಳಿಕ ಹೊಸ ಮದ್ಯದಂಗಡಿ ತೆರೆಯಲು ಅನುಮತಿ ನೀಡಿಲ್ಲ ,''ಎಂದು ಹೇಳಿದ್ದರು.

**ಆತ್ಮಹತ್ಯೆ ಮಾಡಿಕೊಳ್ಳಬೇಡಿ:** ''ಸರಕಾರ ರೈತರ ಸಾಲವನ್ನು ಮನ್ನಾ ಮಾಡಿದೆ. ಆದರೂ, ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಇದು ನನಗೆ ತುಂಬಾ ನೋವುಂಟು ಮಾಡಿದೆ. ದುಡುಕಿ ಯಾವೊಬ್ಬ ರೈತನೂ ಆತ್ಮಹತ್ಯೆ ಮಾಡಿಕೊಂಡು ಕುಟುಂಬನ್ನು ಬೀದಿಗೆ ತಳ್ಳಬೇಡಿ. ನಿಮ್ಮ(ರೈತ) ನೆರವಿಗೆ ಸರಕಾರ ಬೆಂಬಲವಾಗಿ ನಿಲ್ಲಲಿದೆ,'' ಎಂದು ಸಿಎಂ ಅಭಯ ನೀಡಿದರು.

**ಪ್ರಶಸ್ತಿ ಪ್ರದಾನ:** ಇದೇ ವೇಳೆ ಲೇಖಕ ಬೋಳುವಾರು ಮಹಮ್ಮದ್ ಕುಂಞ 'ಜಯಶ್ರೀ ಟ್ರಸ್ಟ್ ಪ್ರಶಸ್ತಿ' ನೀಡಿ ಗೌರವಿಸಲಾಯಿತು. ವಾರ್ತಾ ಇಲಾಖೆಯ ಮಾಸಿಕ ಪತ್ರಿಕೆಯ ಕನ್ನಡ ಹಾಗೂ ಇಂಗ್ಲಿಷ್ ಅವತರಣಿಕೆಯ ವಿಶೇಷ ಸಂಚಿಕೆಗಳನ್ನು ಸಿಎಂ ಬಿಡುಗಡೆ ಮಾಡಿದರು.

ಮಾಜಿ ಸಚಿವ ಎಚ್.ಕೆ.ಪಾಟೀಲ್, ಕೇಂದ್ರದ ಮಾಜಿ ಸಚಿವ ಎಂ.ವಿ.ರಾಜಶೇಖರನ್, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೊಡೇ ಪಿ ಕೃಷ್ಣ, ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣ ಮತ್ತಿತರರಿದ್ದರು.



ಬೆಂಗಳೂರಿನ ಗಾಂಧಿ ಭವನದಲ್ಲಿ ಮಂಗಳವಾರ ನಡೆದ ಕಾರ್ಯಕ್ರಮದಲ್ಲಿ ಸಿಎಂ ಕುಮಾರಸ್ವಾಮಿ ಅವರು ಲೇಖಕ ಬೋಳುವಾರು ಮಹಮ್ಮದ್‌ಗೆ 'ಜಯಶ್ರೀ ಟ್ರಸ್ಟ್ ಪ್ರಶಸ್ತಿ' ನೀಡಿ ಗೌರವಿಸಿದರು. ಮಾಜಿ ಸಚಿವ ಎಚ್.ಕೆ.ಪಾಟೀಲ್, ವೊಡೇ ಪಿ ಕೃಷ್ಣ, ಇಂದಿರಾ ಕೃಷ್ಣಪ್ಪ ಹಾಜರಿದ್ದರು.

> ಗಾಂಧೀಜಿ ನುಡಿದಂತೆ ನಡೆಯುತ್ತಿದ್ದ ಕಾರಣ ಅವರನ್ನು ಜನ ಇರುವೆಯಂತೆ ಮುತ್ತಿಕೊಳ್ಳುತ್ತಿದ್ದರು. ಸ್ವಾತಂತ್ರ್ಯ ಹೋರಾಟದಲ್ಲೂ ಇಂಥದ್ದೇ ಸನ್ನಿವೇಶ ಎದುರಾಗಿತ್ತು. ಮಹಾತ್ಮನ ಪ್ರಸ್ತುತತೆ ಹಿಂದಿಗಿಂತಲೂ ಈಗ ಅತ್ಯಗತ್ಯ.
>
> **- ಬೋಳುವಾರು ಮಹಮ್ಮದ್ ಕುಂಞ** ಲೇಖಕ

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ

ಬುಧವಾರ 3 ಅಕ್ಟೋಬರ್ 2018
VIJAYAVANI » 3 OCTOBER 2018

# ಗಾಂಧಿ ಕನಸು ನನಸಾಗಿಸುವುದು ನಮ್ಮ ಗುರಿ

## ಮುಖ್ಯಮಂತ್ರಿ ಕುಮಾರಸ್ವಾಮಿ ಅಭಿಮತ » ಗಾಂಧಿ ಭವನದಲ್ಲಿ ಬಾ-ಬಾಪೂ 150ನೇ ವರ್ಷಾಚರಣೆ




ಮುಖ್ಯಮಂತ್ರಿ ಕುಮಾರಸ್ವಾಮಿ 'ಬಾ-ಬಾಪೂ 150 ವರ್ಷಾಚರಣೆ'ಯ ಫಲಕವನ್ನು ಮಂಗಳವಾರ ಅನಾವರಣಗೊಳಿಸಿದರು.

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ವಿಲಾಸಿ ಜೀವನ ಮತ್ತು ಸ್ವೇಚ್ಛಾಚಾರಕ್ಕೆ ಕಡಿವಾಣ ಹಾಕಿ. ಮಹಿಳಾ ರಕ್ಷಣೆಗೆ ಒತ್ತು ನೀಡುವ ಮೂಲಕ ಗಾಂಧಿ ಕನಸು ನನಸು ಮಾಡುವುದೇ ನಮ್ಮ ಉದ್ದೇಶ ಎಂದು ಮುಖ್ಯಮಂತ್ರಿ ಎಚ್.ಡಿ. ಕುಮಾರ ಸ್ವಾಮಿ ಹೇಳಿದ್ದಾರೆ.

ಗಾಂಧಿ ಸ್ಮಾರಕ ನಿಧಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ಸಹಯೋಗದೊಂದಿಗೆ ಆಯೋಜಿಸಿದ್ದ 'ಬಾ-ಬಾಪೂ 150 ವರ್ಷಾಚರಣೆ' ಕಾರ್ಯಕ್ರಮ ಉದ್ಘಾಟಿಸಿ, ರಾಜ್ಯದಲ್ಲಿ ನಡೆಯುತ್ತಿರುವ ಅಕ್ರಮ, ಅನೈತಿಕ ಚಟುವಟಿಕೆಗಳಿಗೆ ಕಡಿವಾಣ ಹಾಕಲಾಗಿದೆ.. ಕೋಟ್ಯಂತರ ರೂ.ಗಳನ್ನು ಸರ್ಕಾರ ವಶಕ್ಕೆ ಪಡೆದಿದೆ. ಮಧ್ಯರಾತ್ರಿ ಮಹಿಳೆ ನಿರ್ಭೀತಿಯಿಂದ ಓಡಾಡುವುದು ಗಾಂಧೀಜಿ ಕನಸಾಗಿತ್ತು. ಅದನ್ನು ನನಸಾಗಿಸಲು ಮಹಿಳೆಯರಿಗೆ ರಕ್ಷಣೆ ನೀಡುವ ಹಿನ್ನೆಲೆಯಲ್ಲಿ ನಗರದಲ್ಲಿ ಎಲ್ಲ ರಸ್ತೆಗಳಿಗೂ ಸಿಸಿ ಕ್ಯಾಮರಾ ಅಳವಡಿಸಲಾಗುತ್ತದೆ ಎಂದರು.

**ಪ್ರತಿ ಜಿಲ್ಲೆಯಲ್ಲಿ ಗಾಂಧಿಭವನ:** ಪ್ರತಿ ಜಿಲ್ಲೆಯಲ್ಲಿ ಗಾಂಧಿಭವನ ತೆರೆಯಲು ಸರ್ಕಾರ ನಿರ್ಧರಿಸಿದೆ. ಈ ಹಿನ್ನೆಲೆಯಲ್ಲಿ 16 ಜಿಲ್ಲೆಗಳಲ್ಲಿ ಸ್ಥಳ ಗುರುತಿಸಲಾಗಿದೆ ಎಂದರು. 12 ವರ್ಷದ ಹಿಂದೆ ನಾನು ಗಾಂಧಿಭವನಕ್ಕೆ ಭೇಟಿ ನೀಡಿದ್ದಾಗ ಇಲ್ಲಿನ ಪರಿಸ್ಥಿತಿ ಕಂಡು 1 ಕೋಟಿ ರೂ.ವೆಚ್ಚದಲ್ಲಿ ನವೀಕರಣಕ್ಕೆ ಆದೇಶ ನೀಡಿದ್ದೆ. ಇದರ ಪರಿಣಾಮ ಇಂದು ಗಾಂಧಿ ಭವನ ಝಗಮಗಿಸುತ್ತಿದೆ ಎಂದರು.

ರಾಷ್ಟ್ರೀಯ ಸೇವಾ ಯೋಜನೆ, ಗಾಂಧಿ ಸಾಹಿತ್ಯ ಕೃತಿ, ಬಾಪು ಪ್ರಪಂಚ ವಿಶೇಷ ಸಂಚಿಕೆ ಬಿಡುಗಡೆ ಮಾಡಲಾಯಿತು. ಕೇಂದ್ರದ ಮಾಜಿ ಸಚಿವ ಎಂ.ವಿ.ರಾಜಶೇಖರ್, ಸಾಹಿತಿ ಬೋಳುವಾರ ಮಹಮ್ಮದ್ ಕುಂಞ, ಮಾಜಿ ಸಚಿವ ಎಚ್.ಕೆ. ಪಾಟೀಲ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಡಿಪಿಆರ್ ನಿರ್ದೇಶಕ ಎನ್.ಆರ್. ವಿಶುಕುಮಾರ್ ಇದ್ದರು.

# ಮದ್ಯಮುಕ್ತ ಕರ್ನಾಟಕ ಕನಸು: ಕುಮಾರಸ್ವಾಮಿ

## ಸಾರಾಯಿ ಲಾಟರಿ ನಿಷೇಧ ಮಾಡಿದ ನಾನು ಮತ್ತೆ ಅನುಮತಿ ಕೊಡಲು ಸಾಧ್ಯವೇ?



ಉದಯಕಾಲ ನ್ಯೂಸ್

ಬೆಂಗಳೂರು: ಕೆಲ ದಿನಗಳಿಂದ ರಾಜ್ಯ ಸರಕಾರ ನೂತನ ಮದ್ಯದಂಗಡಿಗಳಿಗೆ ಪರವಾನಗಿ ನೀಡುವ ಬಗ್ಗೆ ಮಾತುಗಳು ಕೇಳಿಬರುತ್ತಿರುವ ಬೆನ್ನಲ್ಲೇ ಈ ಬಗ್ಗೆ ಸ್ಪಷ್ಟೀಕರಣ ನೀಡಿರುವ ಸಿಎಂ ಕುಮಾರಸ್ವಾಮಿ, 'ನನ್ನ ಅಧಿಕಾರಾವಧಿಯಲ್ಲಿ ಮದ್ಯದಂಗಡಿ ತೆರೆಯಲು ಅನುಮತಿ ಅಸಾಧ್ಯ' ಎಂದು ಕಡ್ಡಿಮುರಿದಂತೆ ಹೇಳಿದ್ದಾರೆ.

ಗಾಂಧಿ ಭವನದಲ್ಲಿ ಮಂಗಳವಾರ ಆಯೋಜಿಸಿದ್ದ 150ನೇ ಗಾಂಧಿ ಜಯಂತಿ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ರಾಜ್ಯದಲ್ಲಿ ಸಾರಾಯಿ ನಿಷೇಧ ಮಾಡುವ ದಿಟ್ಟ ತೀರ್ಮಾನ ಕೈಗೊಂಡಿದ್ದು ನನ್ನ ಅವಧಿಯಲ್ಲಿಯೇ. ಹೀಗಿರುವಾಗ ಮತ್ತೊಮ್ಮೆ ಈ ಅಂಗಡಿ ತೆರೆಯಲು ನಾನು ಅನುಮತಿ ನೀಡಲು ಹೇಗೆ ಸಾಧ್ಯ ಎಂದು ಪ್ರಶ್ನಿಸಿದ್ದಾರೆ.

ಹಿಂದೆ ಸಾರಾಯಿ ನಿಷೇಧ ಮಾಡಿದ ನಾನು, ಮದ್ಯದಂಗಡಿಗಳನ್ನು ತೆರೆಯಲು ಎಂದಿಗೂ ಅನುಮತಿ ಕೊಡುವುದಿಲ್ಲ, ಮಹಾತ್ಮ ಗಾಂಧಿ ಅವರು ಕಂಡ 'ಮದ್ಯಮುಕ್ತ ರಾಜ್ಯ ನನ್ನ ಕನಸು' ಎಂದು ಘೋಷಿಸಿದ್ದಾರೆ.

ರಾಜ್ಯದಲ್ಲಿ ಲಾಟರಿ, ಸಾರಾಯಿ ನಿಷೇಧವಾಗಿದೆ. ಈ ಕುರಿತು ಅಬಕಾರಿ ಇಲಾಖೆಯ ಕೆಲವು ಅಧಿಕಾರಿಗಳು ಈ ಬಗ್ಗೆ ಮಾಹಿತಿ ಕಲೆ ಹಾಕುವ ಕೆಲಸ ಮಾಡಿದ್ದಾರ ಹೊರತು ಪರವನಾಗಿ ನೀಡುವ ಕೆಲಸ ಮಾಡುವುದಿಲ್ಲ. ಈ ಬಗ್ಗೆ ಯೋಜನೆ ಮಾಡಿಲ್ಲ ಇಲ್ಲ ಎಂದು ಸ್ಪಷ್ಟಪಡಿಸಿದರು.

ಗಾಂಧೀಜಿ ತತ್ವ ಅನುಸರಿಸಬೇಕೆಂದು ನಾನು ರಾಜಕೀಯಕ್ಕೆ ಬಂದವನು. ಹಾಗೆ ನಡೆದು ಕೊಳ್ಳುತ್ತಿದ್ದೇನೆ.

ಪುಟ 11

## ಕನಸು: ಕುಮಾರಸ್ವಾಮಿ

ಮಧ್ಯರಾತ್ರಿ ಮಹಿಳೆಯೊಬ್ಬಳು ಯಾವುದೇ ಭೀತಿಯಿಲ್ಲದ್ದೆ ಓಡಾಡುವಂಥ ಗಾಂಧಿಜಿಯವರ ಕನಸು ಕರ್ನಾಟಕ ದಲ್ಲಿ ನನಸು ಮಾಡುವ ನಿಟ್ಟಿನಲ್ಲಿ ನಮ್ಮ ಸರಕಾರ ಹಜ್ಜೆ ಇಟ್ಟಿದೆ. ಬೆಂಗಳೂರನ್ನು ಶಾಂತಿಯುತ ನಗರವನ್ನಾಗಿಸುವುದಲ್ಲದೆ, ಇಡೀ ರಾಜ್ಯದ ಸಮಗ್ರ ಅಭಿವೃದ್ಧಿಗೆ ಸರಕಾರ ಪಣ ತೊಟ್ಟಿದೆ ಎಂದು ಹೇಳಿದರು.

**ಜನತಾದರ್ಶನ ಕಾಟಚಾರಕ್ಕಲ್ಲ**

ರಾಜ್ಯದ ಮುಖ್ಯಮಂತ್ರಿಯಾಗಿರುವ ನಾನು ರಾಜ್ಯದ ನಾಗರಿಕರ ಸಮಸ್ಯೆಗಳನ್ನು ಆಲಿಸುವ ಕಾರ್ಯಕ್ರಮ ಮಾಡುತ್ತಿದ್ದೇನೆ. ಇದನ್ನು ನಾನು ಕಾಟಾಚಾರಕ್ಕೆ ಮಾಡುತ್ತಿಲ್ಲ, ಪ್ರತಿ ವಾರ ಜನರ ಸಮಸ್ಯೆಗಳನ್ನು ಆಲಿಸಿ ಕಷ್ಟಗಳಿಗೆ ಸ್ಪಂದಿಸುತ್ತಿದ್ದೇನೆ ಸಾವಿರಾರು ಜನ ನಾನ ರೀತಿಯ ಕಷ್ಟ ಹೇಳಿಕೊಂಡು ಬರುತ್ತಿದ್ದಾರೆ. ಅವರ ಕಷ್ಟ ಪರಿಹರಿಸುವುದು ಕರ್ತವ್ಯ ಎಂದರು.

ಈ ವೇಳೆ ಮಾಜಿ ಸಚಿವ ಎಚ್.ಕೆ ಪಾಟೀಲ್, ಕೇಂದ್ರ ಮಾಜಿ ಸಚಿವ ಎಂ.ವಿ ರಾಜಶೇಖರನ್ ಹಾಗೂ ಗಾಂಧಿಭವನದ ಅಧ್ಯಕ್ಷರಾದ ಡಬ್ಲ್ಯೂ.ಪಿ ಕೃಷ್ಣ ಸೇರಿದಂತೆ ವಿವಿಧ ಗಣ್ಯರು ಕಾರ್ಯಕ್ರಮದಲ್ಲಿ ಭಾಗಿಯಾಗಿದ್ದರು.

# ಗಾಂಧಿ ಮಾರ್ಗ ತೊರೆದರೆ ಬೇರೊಂದು ಹಾದಿಯಿಲ್ಲ

## ಗಾಂಧಿ ಸೇವಾ ಪ್ರಶಸ್ತಿ ಪುರಸ್ಕೃತ ರಂಗಕರ್ಮಿ ಪ್ರಸನ್ನ ಅಭಿಮತ

ಸಂ.ಕ. ಸಮಾಚಾರ ಬೆಂಗಳೂರು:

ದೇಶದಲ್ಲಿ ಕಾರ್ಪೋರೇಟ್ ಯುಗ ಅಂತ್ಯವಾಗುವ ಕಾಲ ಸನ್ನಿಹಿತವಾಗುತ್ತಿದೆ. ಮತ್ತೆ ಗಾಂಧಿ ಮಾರ್ಗ ಬಿಟ್ಟರೆ ಬೇರೆ ಮಾರ್ಗವೇ ಇಲ್ಲ ಎಂದು ರಂಗಕರ್ಮಿ ಪ್ರಸನ್ನ ಅಭಿಪ್ರಾಯಪಟ್ಟಿದ್ದಾರೆ.

ರಾಜ್ಯ ಸರ್ಕಾರದ ಮಹಾತ್ಮಗಾಂಧಿ ಸೇವಾ ಪ್ರಶಸ್ತಿ ಸ್ವೀಕರಿಸಿ ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದ ಅವರು, ಅಭಿವೃದ್ಧಿಯ ಪರಿಕಾರ ಎಂದು ಗಾಂಧೀಜಿಯವರನ್ನು ಸ್ವೀಕರಿಸಬೇಕಾದ ಕಾಲ ಬಂದಿದ. ಬೃಹತ್‌ಯೋಜನೆಗಳ ಸುತ್ತಲೇ ಗಿರಿಕಿಹೊಡೆಯುತ್ತಿದ್ದ ಹಾಗೂ ನಗರ ಕೇಂದ್ರಿತವಾಗಿದ್ದ ಹಾಗೂ ಮಾನವರನ್ನು ಮಾರುಕಟ್ಟೆಯ ಗುಲಾಮರನ್ನಾಗಿಸಿದ್ದ ಅಭಿವೃದ್ಧಿ ಮಾದರಿಯನ್ನು ತಿರಸ್ಕರಿಸಬೇಕಾದ ಕಾಲಬಂದಿದೆ. 2008ರಲ್ಲಿ ಕಾಲ್ಕಿರಿಸಿದ ಆರ್ಥಿಕ ಸಂಕಷ್ಟ ಮುಂದುವರೆದಿದೆ. ಮಾರಣಾಂತಿಕ ಕಾಯಿಲೆಯಂತೆ ವಾಸಿಯಾದಂತೆ ಆಗಾಗ ಭ್ರಮೆ ಹುಟ್ಟಿಸುತ್ತ, ನಿಶ್ಚಿತ ಮರಣದತ್ತ ಮನುಕುಲವನ್ನು ಕೊಂಡೊಯ್ಯುತ್ತಿದೆ ಅದು. ಪಶ್ಚಿಮ ಘಟ್ಟಗಳು ಜರುಗುತ್ತಿವೆ. ಕೊಚ್ಚಿಕೊಂಡು ಹೋಗುತ್ತಿವೆ. ಹೆಚ್ಚು ಮಳೆಬಿದ್ದ ವರ್ಷವೇ ಹೆಚ್ಚು ಬರಗಾಲವೂ ಬಂದಿದೆ. ಆಧುನಿಕತೆಯ ಮೇರುಕೃತಿಗಳಂತೆ ಕಾಣುತ್ತಿದ್ದ ನಗರಗಳು, ವಿಪರೀತ ಚಲನಶೀಲತೆಯಿಂದಾಗಿ ಚಲಿಸಲಾರದೆ ನಿಂತಿವೆ. ಸಂಪತ್ತು ಬೆರಳೆಣಿಕೆಯ ಕೆಲವರ ಜೇಬಿಗೆ ಇಳಿಸುತ್ತಿದೆ. ಬಡವ ಬಲ್ಲಿದರ ಅಂತರ ಹಿಗ್ಗಿಸುತ್ತಿದೆ. ಉದ್ಯೋಗ ಕೊಲ್ಲುತ್ತಿದೆ. ರಾಜಕಾರಣ ಹಾಗೂ ಧರ್ಮಕಾರಣ ಎರಡನ್ನೂ ಭ್ರಷ್ಟಗೊಳಿಸುತ್ತಿದೆ ಎಂದು ಬೇಸರ ವ್ಯಕ್ತಪಡಿಸಿದರು.



ಹಿರಿಯ ರಂಗಕರ್ಮಿ ಮತ್ತು ಗಾಂಧಿವಾದಿ ಹೆಗ್ಗೋಡು ಪ್ರಸನ್ನ ಅವರಿಗೆ ಮುಖ್ಯಮಂತ್ರಿ ಕುಮಾರಸ್ವಾಮಿ ಪ್ರತಿಷ್ಠಿತ 'ಗಾಂಧಿ ಸೇವಾ ಪ್ರಶಸ್ತಿ' ನೀಡಿ ಗೌರವಿಸಿದರು. ಈ ಸಂದರ್ಭದಲ್ಲಿ ನಿವೃತ್ತ ನ್ಯಾ. ಗೋಪಾಲಗೌಡ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೊಡೆ ಪಿ. ಕೃಷ್ಣ, ವಾರ್ತಾ ಇಲಾಖೆಯ ನಿರ್ದೇಶಕ ವಿಶುಕುಮಾರ್, ಕಾರ್ಯದರ್ಶಿ ಪಂಕಜ್‌ಕುಮಾರ್ ಪಾಂಡೆ, ಮುಖ್ಯಮಂತ್ರಿಗಳ ಮಾಧ್ಯಮ ಕಾರ್ಯದರ್ಶಿ ಎಚ್‌ಬಿ ದಿನೇಶ್ ಉಪಸ್ಥಿತರಿದ್ದರು.

ಗಾಂಧೀಜಿಯವರ ಜೀವಿತಕಾಲದಲ್ಲಾದರೋ ಬೃಹತ್ತಿನ ಬಗ್ಗೆ ಇನ್ನೂ ಭ್ರಮೆ ಉಳಿದಿತ್ತು. ಹಾಗಾಗಿ ಅವರ ಅಭಿವೃದ್ಧಿ ಮಾದರಿ ಕನಸಾಗಿ ಉಳಿದಿತ್ತು. ಈಗ, ಗಾಂಧಿಮಾರ್ಗ ಬಿಟ್ಟರೆ ಬೇರೆ ಮಾರ್ಗವಿಲ್ಲ. ಹಾಸಿಗೆಯಿದ್ದಷ್ಟು ಕಾಲುಚಾಚು ಎನ್ನುತ್ತದೆ ಗಾಂಧಿಮಾರ್ಗ ಎಂದ ಅವರು, ಲಕ್ಷಾಂತರ ಜನರಿಗೆ ಉದ್ಯೋಗ ಒದಗಿಸುವಂತಹ ಕೈಮಗ್ಗ ಕ್ಷೇತ್ರವನ್ನು ಅಭಿವೃದ್ಧಿಪಡಿಸಬೇಕು. ಈ ಬಗ್ಗೆ ಸರ್ಕಾರ ಗಮನಿಸಬೇಕು ಎಂದು ಮನವಿ ಮಾಡಿದರು.

**ಗುಡಿಕೈಗಾರಿಕೆಗೆ ಆದ್ಯತೆ**

ಪ್ರಸನ್ನ ಅವರ ಮಾತಿಗೆ ಮುಖ್ಯಮಂತ್ರಿ ಎಚ್.ಡಿ. ಕುಮಾರಸ್ವಾಮಿ ಸ್ಪಂದಿಸಿ ಗುಡಿ ಕೈಗಾರಿಕೆಗಳ ಅಭಿವೃದ್ಧಿಗೆ, ಪರಿಸರ ಉಳಿವಿಗೆ ಸರ್ಕಾರ ಬದ್ಧವಾಗಿದೆ. ಕೈಮಗ್ಗ ಕ್ಷೇತ್ರ ಬೆಳವಣಿಗೆಗೆ ಸಂಬಂಧಿಸಿದಂತೆ ತಮ್ಮ ಬಳಿ ಚರ್ಚೆ ಮಾಡಿ ಸಲಹೆಗಳನ್ನು ಸ್ವೀಕಾರ ಮಾಡಿ ಅದನ್ನು ಅನುಷ್ಠಾನ ಮಾಡುವ ಜವಾಬ್ದಾರಿ ತಮ್ಮದು ಎಂದು ಆಶ್ವಾಸನೆ ನೀಡಿದರು. ಸುಪ್ರೀಂಕೋರ್ಟ್ ನಿವೃತ್ತ ನ್ಯಾಯಮೂರ್ತಿ ಗೋಪಾಲಗೌಡ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ. ಕೃಷ್ಣ, ವಾರ್ತಾ ಇಲಾಖೆ ಕಾರ್ಯದರ್ಶಿ ಪಂಕಜ್ ಕುಮಾರ್ ಪಾಂಡೆ, ನಿರ್ದೇಶಕ ಎನ್.ಆರ್. ವಿಶುಕುಮಾರ್ ಉಪಸ್ಥಿತರಿದ್ದರು.

ಕನ್ನಡಪ್ರಭ

ಬುಧವಾರ 3.10.2018

# ಗಾಂಧಿ ಮಾರ್ಗ ಬಿಟ್ಟರೆ ಬೇರೆಯಿಲ್ಲ: ಪ್ರಸನ್ನ

## ಹಿರಿಯ ರಂಗಕರ್ಮಿಗೆ ಗಾಂಧಿ ಸೇವಾ ಗ್ರಾಮ ಪ್ರಶಸ್ತಿ ಪ್ರದಾನ | ಬೃಹತ್ತಿನ ಭ್ರಮೆ ಬಿಟ್ಟು ಸ್ವಾವಲಂಬನೆಗೆ ಆದ್ಯತೆ ನೀಡಲು ಸಲಹೆ

• ಕನ್ನಡಪ್ರಭ ವಾರ್ತೆ ಬೆಂಗಳೂರು

ಬೃಹತ್ ಯಂತ್ರೋದ್ಯಮ, ಯೋಜನೆಗಳ ಸುತ್ತಲೇ ಗಿರಕಿ ಹೊಡೆಯುವ ಮೂಲಕ ನಗರಕೇಂದ್ರಿತ ಮಾರುಕಟ್ಟೆಯ ಗುಲಾಮರನ್ನಾಗಿಸಿದ್ದ 'ಅಭಿವೃದ್ಧಿ ಮಾದರಿ'ಯನ್ನು ತಿರಸ್ಕರಿಸಿ, ಗಾಂಧೀಜಿ, ಬುದ್ಧ, ಬಸವ ಅವರನ್ನು ಮಂದಿರಗಳಿಂದ ಬಿಡುಗಡೆಗೊಳಿಸಿ ಅಭಿವೃದ್ಧಿಯ ಹರಿಕಾರರನ್ನಾಗಿ ಸ್ವೀಕರಿಸಬೇಕಾದ ಕಾಲ ಬಂದಿದೆ. ಗಾಂಧಿ ಮಾರ್ಗ ಬಿಟ್ಟರೆ ಬೇರೆ ಮಾರ್ಗವಿಲ್ಲ ಎಂದು ರಂಗಕರ್ಮಿ ಹೆಗ್ಗೋಡು ಪ್ರಸನ್ನ ಅಭಿಪ್ರಾಯ ವ್ಯಕ್ತಪಡಿಸಿದರು.

ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ರವೀಂದ್ರ ಕಲಾಕ್ಷೇತ್ರದಲ್ಲಿ ಮಂಗಳವಾರ ಆಯೋಜಿಸಿದ್ದ ಗಾಂಧೀಜಿ ಅವರ 150ನೇ ಜನ್ಮದಿನಾಚರಣೆಯಲ್ಲಿ ರಾಜ್ಯ ಸರ್ಕಾರ ನೀಡುವ 'ಮಹಾತ್ಮ ಗಾಂಧಿ ಸೇವಾ ಗ್ರಾಮ ಪ್ರಶಸ್ತಿ' ಸ್ವೀಕರಿಸಿ ಅವರು ಮಾತನಾಡಿದರು.

ಅಭಿವೃದ್ಧಿಯನ್ನು ತಿರಸ್ಕರಿಸಬೇಕು ಎಂದ ಮಾತ್ರಕ್ಕೆ ಯಂತ್ರಗಳು, ಬೃಹತ್ ಯೋಜನೆಗಳು, ಮಹಾನಗರಗಳನ್ನು ಹಾಗೂ ವಿದ್ಯುತ್ ದೀಪಗಳನ್ನು ಸುಲಭವಾಗಿ ಆರಿಸಿಬಿಡಬೇಕು ಎಂದು ಹೇಳುತ್ತಿಲ್ಲ, ಅದು ಸಾಧ್ಯ ಕೂಡ ಇಲ್ಲ. ಆದರೆ, ಬೃಹತ್ತಿನ ಕಾಲ ಮುಗಿಯುತ್ತಾ ಬಂದಿದೆ. ಏಕೆಂದರೆ, 2008ರಲ್ಲಿ ದೇಶಕ್ಕೆ ಎರಗಿದ ಆರ್ಥಿಕ ಸಂಕಷ್ಟ ಮುಂದುವರಿದಿದೆ. ಮಾರಣಾಂತಿಕ ಕಾಯಿಲೆಯಂತೆ ಮನುಕುಲವನ್ನು ಅದು ಅಪಾಯದತ್ತ ಕೊಂಡೊಯ್ಯುತ್ತಿದೆ ಎಂದು ಆತಂಕ ವ್ಯಕ್ತಪಡಿಸಿದರು. ಗಾಂಧೀಜಿ ಅವರ ಜೀವಿತದ ಅವಧಿಯಲ್ಲಿಯೇ ಬೃಹತ್ತಿನ ಬಗ್ಗೆ ಭ್ರಮೆ ಇದ್ದುದರಿಂದ ಗಾಂಧೀಜಿ ಅವರ ಅಭಿವೃದ್ಧಿ ಕನಸು ನನಸಾಗಲಿಲ್ಲ. ಈಗ ಗಾಂಧಿ ಮಾರ್ಗ ಬಿಟ್ಟರೆ ಬೇರೆ ಮಾರ್ಗವಿಲ್ಲ. ಸರಳತೆ ಬದುಕಿನ ಮಾರ್ಗವಾಗಿದೆ.



ಬೆಂಗಳೂರಿನಲ್ಲಿ ಮಂಗಳವಾರ ಆಯೋಜಿಸಿದ್ದ ಗಾಂಧೀಜಿ 150ನೇ ಜನ್ಮದಿನಾಚರಣೆಯಲ್ಲಿ ರಂಗಕರ್ಮಿ ಪ್ರಸನ್ನ ಅವರಿಗೆ ಮುಖ್ಯಮಂತ್ರಿ ಕುಮಾರಸ್ವಾಮಿ 'ಮಹಾತ್ಮಾ ಗಾಂಧಿ ಸೇವಾ ಗ್ರಾಮ ಪ್ರಶಸ್ತಿ' ಪ್ರದಾನ ಮಾಡಿದರು.

ಆದರೆ, ಬಲಪಂಥೀಯ ರಾಜಕಾರಣ ಧಾರ್ಮಿಕ ಅಸಹಿಷ್ಣುತೆ ಮತ್ತು ಆರ್ಥಿಕ ಅಸಹಿಷ್ಣುತೆಗಳನ್ನು ಬೆಳೆಸುತ್ತಿದೆ. ಇದನ್ನು ಗಾಂಧಿ ಮಾರ್ಗವಾದ ಅಹಿಂಸಾ ತತ್ವದಿಂದ ಮಾತ್ರ ಸರಿಪಡಿಸಲು ಸಾಧ್ಯ ಎಂದರು.

ಪಶ್ಚಿಮ ಘಟ್ಟಗಳು ಕೊಚ್ಚಿಕೊಂಡು ಹೋಗುತ್ತಿವೆ. ಹೆಚ್ಚು ಮಳೆಯಾದ ವರ್ಷವೇ ಬರಗಾಲವೂ ಬಂದಿದೆ. ವರ್ಷವಿಡೀ ಹರಿಯುತ್ತಿದ್ದ ಹಳ್ಳ ಕೊಳ್ಳಗಳು ತಿಂಗಳಾಗುವಷ್ಟರಲ್ಲಿ ಬತ್ತಿವೆ. ಒಂದು ಕಾಲದಲ್ಲಿ ಆಧುನಿಕತೆಯ ಮೇರುಕೃತಿಗಳಂತೆ ಕಾಣುತ್ತಿದ್ದ ನಗರಗಳು ವಿಪರೀತ ಚಲನೆಯಿಂದ ಚಲಿಸಲಾರದೆ ನಿಂತಿವೆ. ಧೂಳು, ವಿಷ ಮತ್ತು ಹಿಂಸೆ ಆವರಿಸುತ್ತಿವೆ. ಸೃಷ್ಟಿಸಿದ ಸಂಪತ್ತೆಲ್ಲವನ್ನೂ ಬೆರಳೆಣಿಕೆ ಮಂದಿ ಜೇಬಿಗೆ ಇಳಿಸುತ್ತಿದ್ದು, ಬಡವ- ಬಲ್ಲಿದರ ಅಂತರ ಹಿಗ್ಗುತ್ತಿದೆ. ಇದು ರಾಜಕಾರಣ ಮತ್ತು ಧರ್ಮಕಾರಣ ಎರಡನ್ನೂ ಭ್ರಷ್ಟಗೊಳಿಸುತ್ತಿದೆ ಎಂದು ತಿಳಿಸಿದರು.

ಮುಖ್ಯಮಂತ್ರಿ ಎಚ್.ಡಿ. ಕುಮಾರಸ್ವಾಮಿ ಮಾತನಾಡಿ, ಗಾಂಧೀಜಿಯವರ 150ನೇ ವರ್ಷಾಚರಣೆ ಅಂಗವಾಗಿ ರಾಜ್ಯ ಸರ್ಕಾರವು ಹಲವಾರು ಯೋಜನೆಗಳನ್ನು ಜಾರಿಗೊಳಿಸಲು ಚಿಂತಿಸುತ್ತಿದೆ. ಈ ಹಿನ್ನೆಲೆಯಲ್ಲಿ ಗಾಂಧಿ ತತ್ವಗಳನ್ನು ಮತ್ತು ಗಾಂಧಿವಾದಿಗಳ ಸಲಹೆಗಳನ್ನು ಸ್ವೀಕರಿಸಲು ಸರ್ಕಾರವು ಸಿದ್ಧವಿದೆ. ಸದ್ಯದಲ್ಲಿಯೇ ಪ್ರಸನ್ನ ಅವರನ್ನು ವಿಧಾನಸೌಧಕ್ಕೆ ಆಹ್ವಾನಿಸಿ ಸಲಹೆ ಪಡೆಯುತ್ತೇನೆ ಎಂದು ಭರವಸೆ ನೀಡಿದರು.

ಗುಡಿ ಕೈಗಾರಿಕೆಗಳನ್ನು ಉಳಿಸಿ ಬೆಳೆಸುವ ನಿಟ್ಟಿನಲ್ಲಿ ಕೈಮಗ್ಗಗಳಿಗೆ ಆದ್ಯತೆ ನೀಡಲಾಗುತ್ತಿದೆ. ತೆಂಗಿನ ನಾರಿನಿಂದ ಮಾಡಿರುವ ವಸ್ತುಗಳಿಗೆ ಆದ್ಯತೆ ನೀಡಿ ಪ್ಲಾಸ್ಟಿಕ್ ವಸ್ತುಗಳನ್ನು ಸಹ ಕಡಿಮೆ ಮಾಡಲಾಗುತ್ತಿದೆ. ಹಣದ ದಾಹಕ್ಕೆ ಒಳಗಾಗಿ ಕೆಲವರು ಸಮಾಜವನ್ನು ಕೆಟ್ಟ ದಾರಿಗೆ ತೆಗೆದುಕೊಂಡು ಹೋಗುತ್ತಿದ್ದಾರೆ. ಶಾಲಾ ಕಾಲೇಜುಗಳ ಬಳಿ ಗಾಂಜಾ ಮಾರಾಟ ಮಾಡುತ್ತಿದ್ದಾರೆ. ಇವುಗಳನ್ನು ಸರಿದಾರಿಗೆ ತರಲು ಕೆಲವು ಕಠಿಣ ನಿರ್ಧಾರಗಳನ್ನು ಜಾರಿಗೊಳಿಸಲು ಸರ್ಕಾರ ಚಿಂತನೆ ನಡೆಸುತ್ತಿದೆ ಎಂದರು. ಪ್ರಶಸ್ತಿ ಆಯ್ಕೆ ಸಮಿತಿ ಅಧ್ಯಕ್ಷ ಸುಪ್ರೀಂಕೋರ್ಟ್ ನಿವೃತ್ತ ನ್ಯಾ.ವಿ.ಗೋಪಾಲಗೌಡ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ. ಕೃಷ್ಣ, ವಾರ್ತಾ ಇಲಾಖೆ ಕಾರ್ಯದರ್ಶಿ ಪಂಕಜ್‌ಕುಮಾರ್ ಪಾಂಡೆ, ನಿರ್ದೇಶಕ ವಿಶುಕುಮಾರ್ ಉಪಸ್ಥಿತರಿದ್ದರು.

### ಪ್ರಶಸ್ತಿ ಮೊತ್ತ 5 ಲಕ್ಷ ಚರಕ ಸಂಸ್ಥೆಗೆ

ಪುರಸ್ಕಾರವಾಗಿ ಸ್ವೀಕರಿಸಿದ ಐದು ಲಕ್ಷ ರು. ನಗದನ್ನು ಅನಕ್ಷರಸ್ಥ ಮಹಿಳೆಯರೇ ನಡೆಸುತ್ತಿರುವ ಚರಕ ಸಂಸ್ಥೆಗೆ ನೀಡುವುದಾಗಿ ಪ್ರಸನ್ನ ತಿಳಿಸಿದರು. ರಾಜ್ಯ ಸರ್ಕಾರ ಪ್ರತಿ ವರ್ಷ ನೀಡುವ ಗಾಂಧಿ ಸೇವಾ ಗ್ರಾಮ ಪ್ರಶಸ್ತಿಯು 5 ಲಕ್ಷ ರು. ನಗದು, ಫಲಕ ಹೊಂದಿದೆ. 2014ರಿಂದ ನಿರಂತರವಾಗಿ ಪ್ರಶಸ್ತಿ ನೀಡಲಾಗುತ್ತಿದ್ದು, ರಾಜ್ಯದಲ್ಲಿ ಈ ಪ್ರಶಸ್ತಿ ಸ್ವೀಕರಿಸುತ್ತಿರುವ ಐದನೇ ವ್ಯಕ್ತಿ ಪ್ರಸನ್ನ ಆಗಿದ್ದಾರೆ.

ಉದಯವಾಣಿ

ಬುಧವಾರ, ಅಕ್ಟೋಬರ್ 3, 2018

# ಗಾಂಧಿ ಕನಸು ಈಡೇರಿಸುವತ್ತ ಹೆಜ್ಜೆ

## ಮಹಿಳೆ ಮಧ್ಯರಾತ್ರಿ ನಿರಾತಂಕವಾಗಿ ಓಡಾಡಲಿದ್ದಾಳೆ । ಮುಖ್ಯಮಂತ್ರಿ ಕುಮಾರಸ್ವಾಮಿ ಭರವಸೆ

ಬೆಂಗಳೂರು: ಮಧ್ಯರಾತ್ರಿಯಲ್ಲಿ ಯಾವುದೇ ಆತಂಕ ಇಲ್ಲದಂತೆ ಮಹಿಳೆಯೊಬ್ಬಳು ಓಡಾಡುವಂತಾಗಬೇಕು ಎಂಬ ಗಾಂಧೀಜಿಯವರ ಕನಸನ್ನು ನನಸು ಮಾಡುವತ್ತ ಸಮ್ಮಿಶ್ರ ಸರ್ಕಾರ ಹೆಜ್ಜೆ ಇಟ್ಟಿದೆ ಎಂದು ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ವಿವಿಧ ಸಂಸ್ಥೆಗಳು ಗಾಂಧಿ ಭವನದಲ್ಲಿ ಮಂಗಳವಾರ ಹಮ್ಮಿಕೊಂಡಿದ್ದ ಗಾಂಧಿ ಜನ್ಮ ವರ್ಷಾಚರಣೆ ಉದ್ಘಾಟಿಸಿ ಮಾತನಾಡಿದ ಅವರು, ಮಧ್ಯರಾತ್ರಿ ಮಹಿಳೆಯೊಬ್ಬಳು ನಿರಾತಂಕವಾಗಿ ಓಡಾಡುವಂತಾಗಬೇಕು ಎಂದು ಗಾಂಧೀಜಿಯವರು ಕಂಡಿದ್ದ ಕನಸು ಕರ್ನಾಟಕದಲ್ಲಿ ನನಸು ಮಾಡುವ ನಿಟ್ಟಿನಲ್ಲಿ ನಮ್ಮ ಸರ್ಕಾರ ಹೆಜ್ಜೆ ಇಟ್ಟಿದೆ. ಮಹಿಳಾ ಸುರಕ್ಷತೆ ಹಾಗೂ ಅಪರಾಧ ಪ್ರಮಾಣ ಕಡಿಮೆ ಮಾಡಲು ಬೇಕಾದ ಎಲ್ಲ ಕ್ರಮ ತೆಗೆದುಕೊಂಡಿದ್ದೇವೆ ಎಂದು ತಿಳಿಸಿದರು.

ಸರ್ಕಾರಕ್ಕೆ ಜನರ ಬೆಂಬಲವೇ ಶ್ರೀರಕ್ಷೆ. ಜನರ ತೆರಿಗೆ ಹಣ ಪೋಲು ಮಾಡದೆ ಜನ ಸೇವೆ ಮಾಡುತ್ತಿದ್ದೇವೆ. ಬೆಂಗಳೂರಿನಲ್ಲಿ ಅಪರಾಧ ಪ್ರಮಾಣ ಕಡಿಮೆ ಮಾಡಲು ಒಳ್ಳೆಯ ಅಧಿಕಾರಿಗಳನ್ನು ತಂದಿದ್ದೇನೆ. ಕೋಟಿ ಕೋಟಿ ಇಟ್ಟುಕೊಂಡು ಇಸ್ಪೀಟು ಆಡುತ್ತಿದ್ದಾರೆ. ಅದನ್ನೆಲ್ಲ ನಿಯಂತ್ರಣಕ್ಕೆ ತರಲು ಸೂಚನೆ ನೀಡಿದ್ದೇನೆ. ಬೆಂಗಳೂರಲ್ಲಿ ಪ್ರತಿಯೊಂದು ರಸ್ತೆಯಲ್ಲೂ ಸಿಸಿ ಟಿವಿ ಅಳವಡಿಸಲು ತೀರ್ಮಾನಿಸಲಾಗಿದೆ. ಜನರ ಭದ್ರತೆ ಹಾಗೂ ಸುರಕ್ಷತೆಗೆ ಹಲವು ಕಠಿಣ ನಿರ್ಧಾರ ಕೈಗೊಳ್ಳುವಂತೆ ಅಧಿಕಾರಿಗಳಿಗೆ ಸೂಚನೆ ನೀಡಿದ್ದೇನೆ ಎಂದು ವಿವರಿಸಿದರು.

**ಬಾರ್‌ಗೆ ಅನುಮತಿ ಇಲ್ಲ:** ಜನತಾ ದರ್ಶನ ಕಾಟಾಚಾರಕ್ಕೆ ಮಾಡುತ್ತಿಲ್ಲ. ರಾಜ್ಯದ ನಾಗರಿಕರ ಸಮಸ್ಯೆ, ಆಲಿಸಿ ಪರಿಹಾರ ನೀಡುವ ಕಾರ್ಯಕ್ರಮ ಇದಾಗಿದೆ. ಕುಮಾರಸ್ವಾಮಿಗೆ ಎರಡು ಮುಖ ಎಂದು ಮಾಧ್ಯಮಗಳಲ್ಲಿ ಬಿಂಬಿಸಲಾಗಿತ್ತು. ಹಿಂದೆ ಸಾರಾಯಿ ನಿಷೇಧ ಮಾಡಿದ್ದರು, ಈಗ ಬಾರ್ ಪರವಾನಗಿ ನೀಡಿದ್ದಾರೆ ಅಂತ ವರದಿ ಮಾಡಿದ್ದಾರೆ. ಲಾಟರಿ, ಸಾರಾಯಿ ನಿಷೇಧ ಮಾಡಿದವನು ಈಗ ಬಾರ್ ಪರವಾನಗಿ ನೀಡುತ್ತೇನೇ? ರಾಜ್ಯದಲ್ಲಿ ಯಾವುದೇ ಹೊಸ ಬಾರ್‌ಗೆ ಅನುಮತಿ ಕೊಟ್ಟಿಲ್ಲ ಹಾಗೂ ಕೊಡುವುದೂ ಇಲ್ಲ ಎಂದರು.

**ಜಿಲ್ಲೆಗೊಂದು ಗಾಂಧಿ ಭವನ:** ರಾಜ್ಯದ ಕೆಲವು ಜಿಲ್ಲೆಗಳಲ್ಲಿ ಗಾಂಧಿ ಭವನ ನಿರ್ಮಾಣ ಕಾರ್ಯ ಆರಂಭವಾಗಿದೆ. ಇನ್ನು ಕೆಲವು ಕಡೆ ಗಾಂಧಿ ಭವನಕ್ಕೆ ಜಾಗ ಗುರುತಿಸಲಾಗಿದೆ. ಎಲ್ಲ ಜಿಲ್ಲೆಗಳಲ್ಲೂ ಗಾಂಧಿ ಭವನ ನಿರ್ಮಾಣ ಮಾಡುತ್ತೇವೆ. ಅಲ್ಲಿ ದಿನಕೊಂದು ಕಾರ್ಯಕ್ರಮ ನಡೆಯುವಂತಾಗಬೇಕು ಎಂದು ಹೇಳಿದರು. ಸಾಹಿತಿ ಬೊಳುವಾರು ಮಹಮ್ಮದ್ ಕುಂಞಿ ಮಾತನಾಡಿ, ಇಂದಿನ ನಮ್ಮ ಮನಸ್ಥಿತಿ ಬದಲಾವಣೆಗೆ ಗಾಂಧಿ ಚಿಂತನೆ ಅಗತ್ಯ. ಗಾಂಧಿ ಮಾರ್ಗ ಅನುಸರಿಸುವುದನ್ನು ಬಿಟ್ಟು, ಹಣ, ಅಧಿಕಾರಕ್ಕಾಗಿ ವಾಮಮಾರ್ಗ ಅನುಸರಿಸುತ್ತಿದ್ದೇವೆ ಎಂದು ಕಳವಳ ವ್ಯಕ್ತಪಡಿಸಿದರು. ಕೇಂದ್ರದ ಮಾಜಿ ಸಚಿವ ಎಂ.ವಿ.ರಾಜಶೇಖರನ್, ಮಾಜಿ ಸಚಿವ ಎಚ್.ಕೆ.ಪಾಟೀಲ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಉಪಸ್ಥಿತರಿದ್ದರು.



ಗಾಂಧಿ ಭವನದಲ್ಲಿ ಮಂಗಳವಾರ ಆಯೋಜಿಸಿದ್ದ ಛಾಯಾಚಿತ್ರಗಳ ಪ್ರದರ್ಶನವನ್ನು ಸಿಎಂ ಕುಮಾರಸ್ವಾಮಿ ಹಾಗೂ ಇತರರು ವೀಕ್ಷಿಸಿದರು.

## ಬಾಪೂಜಿ ಕುಟುಂಬ, ದೇಶದ ಸಂಪತ್ತು: ಸುಮಿತ್ರಾ ಗಾಂಧಿ

ಬೆಂಗಳೂರು: ಗಾಂಧೀಜಿ ನಮ್ಮ ಕುಟುಂಬದ ಆಸ್ತಿ ಮಾತ್ರವಲ್ಲ, ಅವರು ಈ ದೇಶದ ಸಂಪತ್ತು ಎಂದು ಗಾಂಧೀಜಿ ಮೊಮ್ಮಗಳು ಸುಮಿತ್ರಾ ಗಾಂಧಿ ಕುಲಕರ್ಣಿ ಹೇಳಿದ್ದಾರೆ. ಬೆಂಗಳೂರು ಪ್ರೆಸ್‌ಕ್ಲಬ್‌ನಲ್ಲಿ ಹಮ್ಮಿಕೊಂಡಿದ್ದ ಗಾಂಧಿ ಜಯಂತಿ ಕಾರ್ಯಕ್ರಮದಲ್ಲಿ ಗಿಡ ನೆಟ್ಟು ಮಾತನಾಡಿದ ಅವರು, ಬಾಪೂಜಿ ತಮ್ಮ ಜೀವಿತಾವಧಿಯಲ್ಲಿ ದೇಶದ ಒಳಿತಿಗಾಗಿ ಅನೇಕ ಉತ್ತಮ ಕೆಲಸಗಳನ್ನು ಮಾಡಿದ್ದಾರೆ. ದೇಶವನ್ನು ಸದೃಢಗೊಳಿಸಲು ಮುಂದಿನ ಪೀಳಿಗೆಗೆ ಮಾರ್ಗದರ್ಶನ ಮಾಡಿದ್ದಾರೆ. ಯುವ ಸಮೂಹ ಗಾಂಧೀಜಿ ಸಂದೇಶಗಳನ್ನು ಅಳವಡಿಸಿಕೊಂಡು ಉತ್ತಮ ವ್ಯಕ್ತಿಗಳಾಗಿ ರೂಪುಗೊಂಡರೆ ಅದೇ ಅವರಿಗೆ ನೀಡುವ ಗೌರವ ಎಂದು ಹೇಳಿದರು. ಪ್ರೆಸ್‌ಕ್ಲಬ್ ಅಧ್ಯಕ್ಷ ಸದಾಶಿವ ಶೆಣೈ, ಪ್ರಧಾನ ಕಾರ್ಯದರ್ಶಿ ಕಿರಣ್‌ಕುಮಾರ್ ಇತರರಿದ್ದರು.

# ರಾಜ್ಯದ ಎಲ್ಲ ಜಿಲ್ಲೆಗಳಲ್ಲೂ ಗಾಂಧಿ ಭವನ: ಸಿಎಂ

ಬೆಂಗಳೂರು, ಅ.2: ಮಹಾತ್ಮ ಗಾಂಧೀಜಿ ಚಿಂತನೆಗಳನ್ನು ಯುವ ಜನತೆಗೆ ತಲುಪಿಸುವ ನಿಟ್ಟಿನಲ್ಲಿ ರಾಜ್ಯದ ಮೂವತ್ತು ಜಿಲ್ಲೆಗಳಲ್ಲೂ ಗಾಂಧಿ ಭವನ ಸ್ಥಾಪಿಸಲು ಉದ್ದೇಶಿಸಲಾಗಿದೆ ಎಂದು ಮುಖ್ಯಮಂತ್ರಿ ಎಚ್.ಡಿ. ಕುಮಾರಸ್ವಾಮಿ ಹೇಳಿದರು.

ಮಂಗಳವಾರ ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ, ರಾಷ್ಟ್ರೀಯ ಸೇವಾ ಯೋಜನೆ ನಗರದ ಗಾಂಧಿ ಭವನದಲ್ಲಿ ಆಯೋಜಿಸಿದ್ದ ಬಾ ಮತ್ತು ಬಾಪು 150ನೇ ಜನ್ಮ ದಿನಾಚರಣೆ ಹಾಗೂ ರಾಷ್ಟ್ರೀಯ ಸೇವಾ ಯೋಜನೆಯ ಸುವರ್ಣ ಸಂಭ್ರಮಕ್ಕೆ ಚಾಲನೆ ನೀಡಿ ಅವರು ಮಾತನಾಡಿದರು.

ಈಗಾಗಲೇ 16 ಜಿಲ್ಲೆಗಳಲ್ಲಿ ಗಾಂಧಿಭವನ ನಿರ್ಮಾಣಕ್ಕೆ ಅಗತ್ಯವಾದ ಭೂಮಿಯನ್ನು ಗುರುತಿಸಲಾಗಿದೆ. ಮುಂದಿನ 15-20 ದಿನಗಳಲ್ಲಿ ಉಳಿದ 14 ಜಿಲ್ಲೆಗಳಲ್ಲಿ ಸ್ಥಳಗಳನ್ನು ಗುರುತಿಸಿ, ಸುಸಜ್ಜಿತವಾದ ಗಾಂಧಿ ಭವನವನ್ನು ನಿರ್ಮಿಸಲು ನನ್ನ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಲಾಗಿದೆ ಎಂದು ಅವರು ಹೇಳಿದರು.

ಮಹಿಳೆಯರ ರಕ್ಷಣೆಗೆ ಬದ್ಧ: ಮಧ್ಯರಾತ್ರಿ ಮಹಿಳೆಯೊಬ್ಬಳು ಒಬ್ಬಂಟಿಯಾಗಿ ತಿರುಗಾಡುವಂತಹ ವಾತಾವರಣವಿದ್ದಾಗ ಮಾತ್ರ ದೇಶದಲ್ಲಿ ನಿಜವಾದ ಸ್ವಾತಂತ್ರ್ಯವಿದೆ ಎಂಬರ್ಥದ ಮಾತುಗಳನ್ನಾಡಿದ್ದರು ಗಾಂಧೀಜಿ. ಅವರ ಮಾತನ್ನು ನನಸು ಮಾಡುವ ನಿಟ್ಟಿನಲ್ಲಿ ಸಮ್ಮಿಶ್ರ ಸರಕಾರ ದಿಟ್ಟ ಕ್ರಮಗಳನ್ನು ಕೈಗೊಳ್ಳಲು ಸಿದ್ಧವಾಗಿದೆ ಎಂದು ಸಿಎಂ ಹೇಳಿದರು.



ಜಯಶ್ರೀ ಟ್ರಸ್ಟ್ ಪ್ರಶಸ್ತಿ ಸ್ವೀಕರಿಸಿದ ಹಿರಿಯ ಸಾಹಿತಿ ಬೊಳುವಾರು ಮಹಮದ್ ಕುಂಞ್ ಮಾತನಾಡಿ, ಇವತ್ತಿನ ಸಮಾಜದಲ್ಲಿ ಯುವ ಸಮುದಾಯಕ್ಕೆ ಮಾದರಿಯಾಗುವಂತಹ ಆದರ್ಶ ವ್ಯಕ್ತಿಗಳು ಇಲ್ಲವಾಗಿದ್ದಾರೆ. ಹೀಗಾಗಿ ನಾವು ಪದೇ ಪದೇ ಗಾಂಧೀಜಿಯವರ ಜೀವನ ವಿಧಾನಗಳನ್ನೇ ಉದಾಹರಿಸಬೇಕಾಗಿದೆ ಎಂದರು.

ಮಹಾತ್ಮಾ ಗಾಂಧೀಜಿ ಮುಸ್ಲಿಮ್ ಪರವಾಗಿದ್ದರು ಎಂಬ ಕಾರಣಕ್ಕಾಗಿ ಅವರನ್ನು ಗುಂಡಿಕ್ಕಿ ಕೊಲ್ಲಲಾಯಿತು. ಗಾಂಧೀಜಿಯವರು ಯಾವುದೇ ಒಬ್ಬ ವ್ಯಕ್ತಿಯ, ಜಾತಿಯ, ಧರ್ಮದ ಪರವಾಗಿರಲಿಲ್ಲ. ಒಟ್ಟು ಮಾನವೀಯ ಮೌಲ್ಯಗಳ ಪರವಾಗಿದ್ದರು. ಆದರೆ, ಅವರನ್ನು ಕೊಂದವರು ಗಾಂಧೀಜಿಯ ಬದುಕಿನ ಸಾರ ಅರಿಯುವಲ್ಲಿ ಸೋತಿದ್ದರು ಎಂದು ಅವರು ತಿಳಿಸಿದರು.

ಕಾರ್ಯಕ್ರಮದಲ್ಲಿ ಜನಪದ ಮತ್ತು ಮಾರ್ಚ್ ಆಫ್ ಕರ್ನಾಟಕದ ಗಾಂಧಿ ವಿಶೇಷ ಸಂಚಿಕೆಗಳನ್ನು ಬಿಡುಗಡೆ ಮಾಡಲಾಯಿತು. ಹಾಗೂ ಗಾಂಧೀಜಿಯವರ ಛಾಯಾಚಿತ್ರ ಪ್ರದರ್ಶನಕ್ಕೆ ಚಾಲನೆ ನೀಡಲಾಯಿತು. ಈ ವೇಳೆ ಮಾಜಿ ಸಚಿವ ಎಚ್.ಕೆ. ಪಾಟೀಲ್, ಎಂ.ವಿ.ರಾಜಶೇಖರನ್, ಗಾಂಧಿ ಭವನದ ಅಧ್ಯಕ್ಷ ವೂಡೆ ಪಿ.ಕೃಷ್ಣ, ಹಿರಿಯ ಗಾಂಧಿವಾದಿ ಚೆನ್ನಮ್ಮ ಹಳ್ಳಿಕೇರಿ, ಗಾಂಧಿ ಭವನದ ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ವಾರ್ತಾ ಇಲಾಖೆಯ ನಿರ್ದೇಶಕ ಎನ್.ಆರ್.ವಿಶುಕುಮಾರ್ ಮತ್ತಿತರರಿದ್ದರು.

### ಮದ್ಯದಂಗಡಿಗೆ ಪರವಾನಿಗೆ ಇಲ್ಲ

"ಮದ್ಯದಂಗಡಿಗೆ ಪರವಾನಿಗೆ ಕೊಡುವಂತೆ ನಾನು ಯಾರಿಗೂ ಸೂಚಿಸಿಲ್ಲ. ಈ ಬಗ್ಗೆ ಪ್ರಸ್ತಾಪವೂ ಬಂದಿಲ್ಲ. ಆದರೆ, ಮಾಧ್ಯಮಗಳು ನನ್ನ ವಿರುದ್ಧ ಎರಡು ಮುಖದ ಕುಮಾರಸ್ವಾಮಿ ಎಂದು ಅಪಪ್ರಚಾರ ಮಾಡಿವೆ. ಮಾಧ್ಯಮಗಳು ಪೂರ್ವಾಪರ ವಿವೇಚಿಸಿ ಸುದ್ದಿ ಮಾಡಬೇಕು.

| ಎಚ್.ಡಿ. ಕುಮಾರಸ್ವಾಮಿ, ಮುಖ್ಯಮಂತ್ರಿ

### ಗಾಂಧಿ ಗ್ರಾಮ ಪುರಸ್ಕಾರಕ್ಕೆ ಆಯ್ಕೆಯಾದ ಗ್ರಾ.ಪಂ.ಗಳು

ಬೆಂಗಳೂರು, ಅ.2: ರಾಜ್ಯ ಸರಕಾರವು 2017-18 ನೇ ಸಾಲಿಗೆ 30 ಜಿಲ್ಲೆಗಳ 176 ಗ್ರಾಮ ಪಂಚಾಯತ್‌ಗಳನ್ನು ಗಾಂಧಿ ಗ್ರಾಮ ಪುರಸ್ಕಾರಕ್ಕೆ ಆಯ್ಕೆ ಮಾಡಿದೆ.

ಬೆಂಗಳೂರು ನಗರ ಜಿಲ್ಲೆಯ ಆನೇಕಲ್ ತಾಲೂಕಿನ ದೊಮ್ಮಸಂದ್ರ, ಬೆಂಗಳೂರು ಉತ್ತರ ತಾಲೂಕಿನ ದೊಡ್ಡಜಾಲ, ಬೆಂಗಳೂರು ದಕ್ಷಿಣ ತಾಲೂಕಿನ ಸೋಮನಹಳ್ಳಿ, ಬೆಂಗಳೂರು ಪೂರ್ವ ತಾಲೂಕಿನ ಕಣ್ಣೂರು ಗ್ರಾಮ ಪಂಚಾಯತ್.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿ ತಾಲೂಕಿನ ಕಾರಹಳ್ಳಿ, ದೊಡ್ಡಬಳ್ಳಾಪುರ ತಾಲೂಕಿನ ಬಾಶೆಟ್ಟಿಹಳ್ಳಿ, ಹೊಸಕೋಟೆ ತಾಲೂಕಿನ ಸೂಲಿಬೆಲೆ, ನೆಲಮಂಗಲ ತಾಲೂಕಿನ ಅರಿಶಿನಕುಂಟೆ ಗ್ರಾಮ ಪಂಚಾಯತ್.

ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ಮುಂಡಾಜೆ, ಬಂಟ್ವಾಳ ತಾಲೂಕಿನ ಬಾಳ್ತಿಲ, ಮಂಗಳೂರು ತಾಲೂಕಿನ ಬೆಳುವಾಯಿ, ಪುತ್ತೂರು ತಾಲೂಕಿನ ಕುಟ್ರುಪ್ಪಾಡಿ, ಸುಳ್ಯ ತಾಲೂಕಿನ ಐವರ್ನಾಡು ಗ್ರಾಮ ಪಂಚಾಯತ್. ಉಡುಪಿ ಜಿಲ್ಲೆಯ ಕಾರ್ಕಳ ತಾಲೂಕಿನ ಯರ್ಲಪಾಡಿ, ಕುಂದಾಪುರ ತಾಲೂಕಿನ ಹೊಸಾಡು, ಉಡುಪಿ ತಾಲೂಕಿನ ಕಾಡೂರು ಗ್ರಾಮ ಪಂಚಾಯತ್.

ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ತಾಲೂಕಿನ ಕಂದಿಕೆರೆ, ಗುಬ್ಬಿ ತಾಲೂಕಿನ ಎಂ.ಎಚ್.ಪಟ್ಟಣ, ಕೊರಟಗೆರೆ ತಾಲೂಕಿನ ತಂಬಾಡಿ, ಕುಣಿಗಲ್ ತಾಲೂಕಿನ ಹೇರೂರು, ಮಧುಗಿರಿ ತಾಲೂಕಿನ ಮರುವೇಕೆರೆ, ಪಾವಗಡ ತಾಲೂಕಿನ ಕೋಟಗುಡ್ಡ, ಶಿರಾ ತಾಲೂಕಿನ ಚಿಕ್ಕನಹಳ್ಳಿ, ತಿಪಟೂರು ತಾಲೂಕಿನ ಅರಳಗುಪ್ಪೆ, ತುಮಕೂರು ತಾಲೂಕಿನ ಪಾಲಸಂದ್ರ, ತುರುವೇಕೆರೆ ತಾಲೂಕಿನ ಮಾಯಸಂದ್ರ ಗ್ರಾಮ ಪಂಚಾಯತ್.

ಇದಲ್ಲದೆ, ಬಾಗಲಕೋಟೆ, ಬೆಳಗಾವಿ, ಬಳ್ಳಾರಿ, ಬೀದರ್, ಚಾಮರಾಜನಗರ, ಚಿಕ್ಕಬಳ್ಳಾಪುರ, ಚಿಕ್ಕಮಗಳೂರು, ಚಿತ್ರದುರ್ಗ, ದಾವಣಗೆರೆ, ಧಾರವಾಡ, ಗದಗ, ಕಲಬುರಗಿ, ಹಾಸನ, ಹಾವೇರಿ, ಕೊಡಗು, ಕೋಲಾರ, ಕೊಪ್ಪಳ, ಮಂಡ್ಯ, ಮೈಸೂರು, ರಾಯಚೂರು, ರಾಮನಗರ, ಶಿವಮೊಗ್ಗ, ಉತ್ತರ ಕನ್ನಡ ಜಿಲ್ಲೆಯ ಗ್ರಾಮ ಪಂಚಾಯತ್‌ಗಳನ್ನು ಗಾಂಧಿ ಗ್ರಾಮ ಪುರಸ್ಕಾರಕ್ಕೆ ಆಯ್ಕೆ ಮಾಡಲಾಗಿದೆ.

ಪ್ರಜಾವಾಣಿ
ಬುಧವಾರ • ಅಕ್ಟೋಬರ್ 3, 2018

## ಚಿಂತಕ, ರಂಗಕರ್ಮಿ ಪ್ರಸನ್ನ ಅವರಿಗೆ ಮಹಾತ್ಮಗಾಂಧಿ ಸೇವಾ ಪ್ರಶಸ್ತಿ ಪ್ರದಾನ

# 'ಬೃಹತ್ತಿನ ಯುಗ ಅಂತ್ಯ ಸನ್ನಿಹಿತ, ಗಾಂಧಿ ಮಾರ್ಗ ಅನಿವಾರ್ಯ'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಮಾರಣಾಂತಿಕ ಕಾಯಿಲೆ ಯಂತಿರುವ ಬೃಹತ್ ಉದ್ಯಮಗಳು ಮತ್ತು ಯೋಜನೆಗಳ ಯುಗ ಮುಗಿ ಯುತ್ತಾ ಬಂದಿದ್ದು, ಈಗ ನಮಗೆ ಗಾಂಧಿ ಮಾರ್ಗ ಬಿಟ್ಟರೆ ಬೇರೆ ಮಾರ್ಗವಿಲ್ಲ' ಎಂದು ಗಾಂಧಿ ಚಿಂತಕ, ರಂಗಕರ್ಮಿ ಪ್ರಸನ್ನ ಹೇಳಿದರು.

ನಗರದ ರವೀಂದ್ರ ಕಲಾಕ್ಷೇತ್ರ ದಲ್ಲಿ ಮಂಗಳವಾರ 'ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ' ಸ್ವೀಕರಿಸಿ ಮಾತನಾಡಿದ ಅವರು, ಅಭಿವೃದ್ಧಿಯ ಹರಿಕಾರ ಎಂದು ಗಾಂಧಿಯವರನ್ನು ಸ್ವೀಕರಿಸಬೇಕಾದ ಕಾಲವೂ ಬಂದಿದೆ ಎಂದರು.

'ಗಾಂಧಿ ಮಾತ್ರವಲ್ಲ ಬುದ್ಧ, ಬಸವ ರನ್ನೂ ಸಹ ಪಾರಮಾರ್ಥಿಕ ಮಂದಿರ ಗಳಿಂದ ಬಿಡುಗಡೆಗೊಳಿಸಿ ಅಭಿವೃದ್ಧಿ ಹರಿಕಾರರನ್ನಾಗಿ ಸ್ವೀಕರಿಸಬೇಕಾ- ಗಿದೆ. ಬೃಹತ್ ಯಂತ್ರೋದ್ಯಮ, ಬೃಹತ್ ಯೋಜನೆಗಳ ಸುತ್ತಲೇ ಗಿರಕಿ ಹೊಡೆಯುತ್ತಿದ್ದ ಮತ್ತು ನಗರ ಕೇಂದ್ರಿತ ಅಭಿವೃದ್ಧಿ ಮಾದರಿಗಳನ್ನು ತಿರಸ್ಕರಿಸ ಬೇಕಾಗಿದೆ. ಹಾಗೆಂದು, ಯಂತ್ರಸ್ಥಾವ ರಗಳು, ಬೃಹತ್ ಯೋಜನೆಗಳು ಮತ್ತು ಮಹಾನಗರಗಳನ್ನು ವಿದ್ಯುತ್ ದೀಪ ಆರಿಸಿದಷ್ಟು ಸುಲಭವಾಗಿ ಆರಿಸಿಬಿ ಡಬೇಕು ಎಂದು ಹೇಳುತ್ತಿಲ್ಲ' ಎಂದರು.

ಒಂದು ಕಾಲದಲ್ಲಿ ಆಧುನಿಕತೆಯ ಮೇರುಕೃತಿಗಳಂತೆ ಕಾಣುತ್ತಿದ್ದ ನಗರ ಗಳು, ವಿಪರೀತ ಚಲನಶೀಲತೆಯಿಂದ ಚಲಿಸಲಾರದೆ ನಿಂತಿವೆ. ಧೂಳು ಆವರು ತ್ತಿದೆ, ಹಿಂಸೆ ತಾಂಡವವಾಡುತ್ತಿದೆ. ಸೃಷ್ಟಿಯಾದ ಸಂಪತ್ತೆಲ್ಲ ಬೆರಳೆಣಿಕೆಯ ಕೆಲವರ ಜೇಬು ಸೇರುತ್ತಿದೆ. ಬಡವ-ಬಲ್ಲಿ ದರ ಅಂತರ ಹಿಗ್ಗುತ್ತಿದೆ. ರಾಜಕಾರಣ ಮತ್ತು ಧರ್ಮಕಾರಣ ಎರಡನ್ನೂ ಭ್ರ- ಷ್ಟಗೊಳಿಸುತ್ತಿದೆ ಎಂದು ವಿಷಾದಿಸಿದರು.

'ಬಲಪಂಥೀಯ ರಾಜಕಾರಣವು ವಿಶ್ವಾದ್ಯಂತ ಧಾರ್ಮಿಕ ಅಸಹಿಷ್ಣುತೆ ಹಾಗೂ ಆರ್ಥಿಕ ಅಸಹಿಷ್ಣುತೆಗಳನ್ನು ಬೆಸೆಯುತ್ತಿದೆ. ಪಾರಮಾರ್ಥಿಕ ಕ್ಷೇತ್ರ ಮತ್ತು ಆರ್ಥಿಕ ಕ್ಷೇತ್ರಗಳನ್ನು ಬೆಸೆಯುವ ರೀತಿ ಅದಲ್ಲ. ಗಾಂಧಿ ಮಾರ್ಗ ಮಾತ್ರ ಅದನ್ನು ಬೆಸೆಯಬಲ್ಲದು' ಎಂದರು.

ಮುಖ್ಯಮಂತ್ರಿಯವರು ಪ್ರಶಸ್ತಿ ಪ್ರದಾನ ಮಾಡಿದರು. ಪ್ರಶಸ್ತಿ ₹ 5 ಲಕ್ಷ ನಗದು ಒಳಗೊಂಡಿದೆ. ಪ್ರಶಸ್ತಿ ಯನ್ನು ಚರಕ ಸಂಸ್ಥೆಯ ಶ್ರಮ ಜೀವಿ ಆಶ್ರಮಕ್ಕೆ ಅರ್ಪಿಸುವುದಾಗಿ ಪ್ರಸನ್ನ ತಿಳಿಸಿದರು.



ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ರಂಗಕರ್ಮಿ ವಿ.ಪ್ರಸನ್ನ ಅವರಿಗೆ ಮಹಾತ್ಮಗಾಂಧಿ ಸೇವಾ ಪ್ರಶಸ್ತಿ ನೀಡಿ ಗೌರವಿಸಿದರು. ಗಾಂಧಿ ಸ್ಮಾರಕ ಭವನ ಅಧ್ಯಕ್ಷ ವೂಡೆ ಪಿ.ಕೃಷ್ಣ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಕಾರ್ಯದರ್ಶಿ ಪಂಕಜ್ ಕುಮಾರ್ ಪಾಂಡೆ ಮತ್ತು ನ್ಯಾಯಮೂರ್ತಿ ವಿ.ಗೋಪಾಲಗೌಡ ಇದ್ದರು

ಸುವರ್ಣ ಟೈಮ್ಸ್ ಆಫ್ ಕರ್ನಾಟಕ
ಬುಧವಾರ, 3 ಅಕ್ಟೋಬರ್ 2018



# ಕಾಟಾಚಾರಕ್ಕೆ ಜನತಾ ದರ್ಶನ ಮಾಡುತ್ತಿಲ್ಲ...

## ಆತ್ಮಹತ್ಯೆ ಬೇಡ : ರೈತರಿಗೆ ಮುಖ್ಯಮಂತ್ರಿ ಮನವಿ

**ಬೆಂಗಳೂರು:** ನಾನು ಕಾಟಾಚಾರಕ್ಕಾಗಿ ಜನತಾದರ್ಶನ ಮಾಡಲ್ಲ. ಬೆಳಗ್ಗೆಯಿಂದ ತಡರಾತ್ರಿವರೆಗೂ ಜನತಾ ದರ್ಶನ ಮಾಡಿ ಹಲವು ಸಮಸ್ಯೆಗಳನ್ನ ಸ್ಥಳದಲ್ಲಿಯೇ ಬಗೆಹರಿಸಿದ್ದೇನೆ ಎಂದು ಮುಖ್ಯಮಂತ್ರಿ ಕುಮಾರಸ್ವಾಮಿ ತಿಳಿಸಿದ್ದಾರೆ.

ಬೆಂಗಳೂರಿನ ಗಾಂಧಿ ಭವನದಲ್ಲಿ ನಡೆದ ಗಾಂಧಿ ಜಯಂತಿ ಕಾರ್ಯಕ್ರಮದಲ್ಲಿ ಮಾತನಾಡಿ, ಸಾಲಮನ್ನಾ ಆದರೂ ರೈತರ ಆತ್ಮಹತ್ಯೆ ನಿಲ್ಲುತ್ತಿಲ್ಲ. ದುಡುಕಿ ನಿರ್ಧಾರ ಕೈಗೊಂಡು ಕುಟುಂಬ ಬೀದಿಗೆ ತರಬೇಡಿ. ದೇವರಾಜು ಅರಸು ತಂದಿದ್ದ ಕ್ರಾಂತಿಕಾರಿ ಯೋಜನೆ ಜಾರಿ ಮಾಡಿದ್ದೇನೆ. ಸರ್ಕಾರಕ್ಕೆ ನಿಮ್ಮ ಬೆಂಬಲವೇ ಶ್ರೀರಕ್ಷೆ ಎಂದು ರೈತರಲ್ಲಿ ಮನವಿ ಮಾಡಿದರು.

ನಿಮ್ಮ ತೆರಿಗೆ ಹಣ ಪೋಲು ಮಾಡದೇ ಜನರ ಕೆಲಸ ಮಾಡುತ್ತೇವೆ. ಬೆಂಗಳೂರಲ್ಲಿ ಅಪರಾಧ ನಿಯಂತ್ರಣಕ್ಕೆ ಒಳ್ಳೆಯ ಅಧಿಕಾರಿಗಳನ್ನು ತಂದಿದ್ದೇವೆ. ಒಂದು-ಎರಡು ಗಂಟೆವರೆಗೂ ಪಾಶ್ಚಾತ್ಯ ಬದುಕು ರೂಢಿಸಿಕೊಂಡಿದ್ದಾರೆ. ಇಸ್ಪೀಟ್ ಅಡ್ಡೆಗಳ ಮೇಲೆ ದಾಳಿ ಮಾಡಿದಾಗ ಕೋಟಿ ಕೋಟಿ ಹಣ ಸಿಕ್ಕಿದೆ. ನಾನೇ ಕರೆ ಮಾಡಿದರೂ ನಿಮ್ಮ ನಿರ್ಧಾರದಿಂದ ವಾಪಸ್ ಬರಬೇಡಿ ಎಂದು ಹೇಳಿದ್ದೇನೆ. ನಗರದಲ್ಲಿ ಹೆಣ್ಣು ಮಕ್ಕಳ ರಕ್ಷಣೆಗೆ ಖಡಕ್ ನಿರ್ಧಾರಕ್ಕೆ ಮುಂದಾಗಿದ್ದೇನೆ ಎಂದು ಹೇಳಿದರು.

ಗಾಂಧಿ ಕನಸು ಗ್ರಾಮ ಸ್ವರಾಜ್ಯ ನನಸಾಗಬೇಕು. ಮಧ್ಯ ರಾತ್ರಿ ಮಹಿಳೆ ನಿರ್ಭಯವಾಗಿ ಓಡಾಡಬೇಕು. ಗಾಂಧಿ ಕನಸಿಗೆ ಸಮ್ಮಿಶ್ರ ಸರ್ಕಾರ ಇದಕ್ಕೆ ಬದ್ಧವಾಗಿದೆ. 365 ದಿನವೂ ಕೌಶಲ್ಯ ಅಭಿವೃದ್ಧಿ ಕಾರ್ಯಕ್ರಮ ನಡೆಯುತ್ತದೆ. ಗಾಂಧಿ ಸ್ಮಾರಕ ಸೇರಿ ಹಲವು ಕಾರ್ಯಕ್ರಮಗಳನ್ನು ಸರ್ಕಾರದ ಮೂಲಕ ಈ ಬಾರಿ ಹಮ್ಮಿಕೊಳ್ಳುತ್ತೇವೆ. ಪ್ರತಿ ಜಿಲ್ಲೆಯಲ್ಲೂ ಗಾಂಧಿ ಭವನ ಕಟ್ಟಲು ನಿರ್ಧರಿಸಲಾಗಿದೆ. ಹಲವಾರು ಭವನ ಕಟ್ಟಿದ್ದೇವೆ. ಅದರ ಪರಿಸ್ಥಿತಿ ಏನಾಗಿದೆ ಎನ್ನುವುದು ನನಗೆ ಗೊತ್ತು. ಗಾಂಧಿ ಭವನದಲ್ಲಿ ದಿನಕ್ಕೊಂದು ಕಾರ್ಯಕ್ರಮ ನಡೆಯಬೇಕು ಎಂದರು.

ಗಾಂಧಿ, ಲಾಲ್ ಬಹದ್ದೂರ್ ಶಾಸ್ತ್ರಿ ಹುಟ್ಟುಹಬ್ಬ ಹಿನ್ನೆಲೆಯಲ್ಲಿ ವಿಧಾನಸೌಧ ಆವರಣದಲ್ಲಿರುವ ಗಾಂಧಿ, ಶಾಸ್ತ್ರಿ ಪ್ರತಿಮೆಗೆ ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ಮಾಲಾರ್ಪಣೆ ಮಾಡಿದರು. ಸಿಎಂಗೆ ಉಪಮುಖ್ಯಮಂತ್ರಿ ಜಿ ಪರಮೇಶ್ವರ್ ಸಾಥ್ ನೀಡಿದರು.

ವಿಶ್ವವಾಣಿ
ಬೆಂಗಳೂರು
vishwavani.news
03.10.2018 ಬುಧವಾರ

# ಗುಡಿ ಕೈಗಾರಿಕೆಗಳ ಅಭಿವೃದ್ಧಿಗೆ ಸರಕಾರ ಬದ್ಧ

ವಿಶ್ವವಾಣಿ ಸುದ್ದಿಮನೆ ಬೆಂಗಳೂರು

ಪರಿಸರಕ್ಕೆ ಪೂರಕವಾದ ಗುಡಿ ಕೈಗಾರಿಕೆಗಳ ಉತ್ತೇಜನಕ್ಕೆ ರಾಜ್ಯ ಸರಕಾರ ಬದ್ಧವಾಗಿದ್ದು, ಕೈಮಗ್ಗ ಅಭಿವೃದ್ಧಿಗೂ ಅಗತ್ಯ ನೆರವು ನೀಡುತ್ತೇವೆ ಎಂದು ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ತಿಳಿಸಿದರು.

150ನೇ ಗಾಂಧಿ ಜಯಂತಿ ಪ್ರಯುಕ್ತ ನಗರದ ರವೀಂದ್ರ ಕಲಾಕ್ಷೇತ್ರದಲ್ಲಿ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಜಂಟಿಯಾಗಿ ಆಯೋಜಿಸಿದ್ದ 2018ನೇ ಸಾಲಿನ 'ಗಾಂಧಿ ಸೇವಾ ಪ್ರಶಸ್ತಿ' ಪ್ರದಾನ ಸಮಾರಂಭದಲ್ಲಿ ಮಾತನಾಡಿ, ಮಹಾತ್ಮರ ಚಿಂತನೆ ಹಾಗೂ ತತ್ತ್ವಾದರ್ಶಗಳನ್ನು ಅಳವಡಿಸಿಕೊಳ್ಳುವಲ್ಲಿ ವಿಫಲವಾಗಿದ್ದೇವೆ. ಆಧುನಿಕ ಸಮಾಜ ಯಾಂತ್ರಿಕ ಬದುಕಿನೊಂದಿಗೆ ಸಾಗುತ್ತಾ ಪರಿಸರದ ಕಾಳಜಿಯನ್ನೇ ಮರೆತಿದೆ. ನಾವೆಷ್ಟು ವೇಗವಾಗಿ ಅಭಿವೃದ್ಧಿ ಕಡೆ ಸಾಗುತ್ತಿದ್ದೇವೋ, ಅಷ್ಟೇ ವೇಗವಾಗಿ ಪರಿಸರವನ್ನೂ ಹಾಳು ಮಾಡುತ್ತಿದ್ದೇವೆ ಎಂದು ಕಳವಳ ವ್ಯಕ್ತಪಡಿಸಿದರು.

ಗಾಂಧಿ ಸೇವಾ ಪ್ರಶಸ್ತಿ ಪುರಸ್ಕೃತ ರಂಗಕರ್ಮಿ ಹೆಗ್ಗೋಡು ಪ್ರಸನ್ನ ಮಾತನಾಡಿ, ಇಂದು ಗಾಂಧೀಜಿ ಅಷ್ಟೇ ಅಲ್ಲ, ಬುದ್ಧ-ಬಸವರನ್ನೂ ನಮ್ಮ ಸೀಮಿತ ಚಿಂತನೆಗಳಿಂದ ಬಿಡುಗಡೆಗೊಳಿಸಿ ಅವರನ್ನೂ ಅಭಿವೃದ್ಧಿಯ ಹರಿಕಾರರಾಗಿ ಯೋಚಿಸಬೇಕಿದೆ.

ಯಾಂತ್ರಿಕ ಜಗತ್ತಿನಲ್ಲಿ ಇಂದು ಎಲ್ಲ ಸೌಲಭ್ಯವಿದ್ದರೂ ಅವು ಎಲ್ಲರಿಗೂ ತಲುಪುತ್ತಿಲ್ಲವಾದ್ದರಿಂದ ನಿಜ ಅರ್ಥದಲ್ಲಿ ಅದು ಅಭಿವೃದ್ಧಿಯೇ ಅಲ್ಲ, ಅಭಿವೃದ್ಧಿ ಸಮಾಜದ ಎಲ್ಲ ವರ್ಗಕ್ಕೆ ತಲುಪಬೇಕು ಎಂದರು.

ಇದೇ ವೇಳೆ ಪ್ರಸನ್ನ ತಮ್ಮ ಚರಕ ಸಂಸ್ಥೆ ಕುರಿತು ಪ್ರಸ್ತಾಪಿಸಿ, ಸ್ಥಳೀಯ ಮಹಿಳೆಯರೇ ಸೇರಿ ನಡೆಸುತ್ತಿರುವ ಗುಡಿ ಕೈಗಾರಿಕೆ ಇಂದು ವಾರ್ಷಿಕ ಆರು ಕೋಟಿ ವಹಿವಾಟು ನಡೆಸುತ್ತಿದೆ. 700 ಕುಟುಂಬಗಳು ಸಂತೃಪ್ತ ಹಾಗೂ ಸ್ವಾಭಿಮಾನದ ಜೀನವ ನಡೆಸುತ್ತಿದ್ದಾರೆ. ಇಂತಹ ಕೈಮಗ್ಗ ಗುಡಿ ಕೈಗಾರಿಕೆಗಳನ್ನು ಸರಕಾರ ಉತ್ತೇಜಿಸಬೇಕು. ಹಾಗೂ ಮತ್ತಷ್ಟು ಗುಡಿ ಕೈಗಾರಿಕೆಗಳ ಸ್ಥಾಪನೆಗೆ ಮುಂದಾಗಬೇಕು ಎಂದು ಮನವಿ ಮಾಡಿದರು.

ಮಕ್ಕಳಿಗಾಗಿ ವಾರ್ತಾ ಇಲಾಖೆ ರೂಪಿಸಿರುವ 'ಬಾಲರ ಬಾಪು' ಪುಸ್ತಕ ಹಾಗೂ ಕ್ಯಾಲೆಂಡರ್‌ಗಳನ್ನು ಬಿಡುಗಡೆ ಮಾಡಲಾಯಿತು. ಇಲಾಖೆ ನಿರ್ದೇಶಕ ಪಂಕಜ್ ಕುಮಾರ್ ಪಾಂಡೆ ಮುತ್ತಿತರರು ಇದ್ದರು.



ರಂಗಕರ್ಮಿ ಹೆಗ್ಗೋಡು ಪ್ರಸನ್ನ ಅವರಿಗೆ 2018ನೇ ಸಾಲಿನ ಗಾಂಧಿ ಸೇವಾ ಪ್ರಶಸ್ತಿಯನ್ನು ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ಪ್ರದಾನ ಮಾಡಿ ಸನ್ಮಾನಿಸಿದರು.

## ರಂಗಕರ್ಮಿ ಪ್ರಸನ್ನಗೆ ಗಾಂಧಿ ಸೇವಾ ಪ್ರಶಸ್ತಿ

ರಾಜ್ಯ ಸರಕಾರ 5ನೇ ಬಾರಿಗೆ ನೀಡುತ್ತಿರುವ ಗಾಂಧಿ ಸೇವಾ ಪ್ರಶಸ್ತಿಯನ್ನು ಹಿರಿಯ ರಂಗಕರ್ಮಿ ಹಾಗೂ ಗಾಂಧಿ ಚಿಂತಕ ಹೆಗ್ಗೋಡು ಪ್ರಸನ್ನ ಅವರಿಗೆ ನೀಡಲಾಯಿತು. ಗಾಂಧಿ ಭಾವಚಿತ್ರವಿರುವ ಪ್ರಶಸ್ತಿ ಫಲಕ ಹಾಗೂ 5 ಲಕ್ಷ ರುಪಾಯಿ ನಗದು ಪುರಸ್ಕಾರ ಪಡೆದ ಪ್ರಸನ್ನ, ತಮ್ಮ ಪ್ರಶಸ್ತಿಯನ್ನು ಶ್ರಮ ಜೀವಿ ಸಂಸ್ಥೆಯಾದ ಚರಕಕ್ಕೆ ಅರ್ಪಿಸಿದರು.

"ರಾಜಕೀಯ ಪಕ್ಷಗಳು ಇಂದು ಗಾಂಧಿ ಹೆಸರಲ್ಲಿ ಓಟು ಕೇಳುತ್ತಿವೆ. ಆದರೆ ಗಾಂಧಿ ಚಿಂತನೆಗಳನ್ನು ಗಾಳಿಗೆ ತೂರಿವೆ. ಹೀಗಾಗಿಯೇ ಎಷ್ಟು ಸರಕಾರಗಳು ಬಂದು ಹೋದರೂ ಸಾಮಾನ್ಯ ವ್ಯಕ್ತಿಯ ಬದುಕು ಬದಲಾವಣೆ ಆಗುತ್ತಿಲ್ಲ. ಈಗಲಾದರೂ ನಾಯಕರು ಗಾಂಧಿ ತತ್ತ್ವಗಳನ್ನು ಪಾಲಿಸಲು ಮುಂದಾಗಬೇಕು.

- ವಿ.ಗೋಪಾಲಗೌಡ
ಸುಪ್ರೀಂ ಕೋರ್ಟ್‌ನ ನಿವೃತ್ತ ನ್ಯಾಯಮೂರ್ತಿ

## ಮಾದಕ ವಸ್ತುಗಳಿಗೆ ವಿದ್ಯಾರ್ಥಿಗಳೇ ಬಲಿ

ಇತ್ತೀಚೆಗೆ ನಗರ ಪ್ರದೇಶದ ಶಾಲಾ-ಕಾಲೇಜು ವಿದ್ಯಾರ್ಥಿಗಳ ಮಾದಕ ವ್ಯಸನಿಗಳಾಗುತ್ತಿರುವ ಸಂಖ್ಯೆ ಹೆಚ್ಚಾಗುತ್ತಿದ್ದು, ಭವಿಷ್ಯದ ಸಮಾಜದ ಕುರಿತು ಆತಂಕ ವ್ಯಕ್ತವಾಗುತ್ತಿದೆ. ಈ ನಿಟ್ಟಿನಲ್ಲಿ ಮಾದಕವಸ್ತು ಸಾಗಣೆ ಮತ್ತು ಮಾರಾಟ ತಡೆಗಟ್ಟಲು ಕಠಿಣ ಕ್ರಮಗಳನ್ನು ಕೈಗೊಳ್ಳಲು ಸರಕಾರ ಎಲ್ಲ ಸಿದ್ಧತೆ ಮಾಡಿಕೊಂಡಿದೆ. ಅದೇ ರೀತಿ ಗಾಂಧಿ ಚಿಂತನೆಗಳನ್ನು ವಿದ್ಯಾರ್ಥಿಗಳಿಗೆ ವರ್ಷಪೂರ್ತಿ ತಲುಪಿಸುವ ಕೆಲಸವನ್ನೂ ಸರಕಾರ ಮಾಡಲಿದೆ ಎಂದು ಸಿಎಂ ಹೇಳಿದರು.

ವಿಶ್ವವಾಣಿ
ಬೆಂಗಳೂರು
vishwavani.news
03.10.2018 ಬುಧವಾರ

## ಮದ್ಯದಂಗಡಿಗಳನ್ನು ತೆರೆಯಲು ಅನುಮತಿ ಕೊಡುವುದಿಲ್ಲ : ಎಚ್.ಡಿ.ಕುಮಾರಸ್ವಾಮಿ

# ಗಾಂಧಿ ಕಂಡ ಮದ್ಯಮುಕ್ತ ರಾಜ್ಯ ನನ್ನ ಕನಸು

**ವಿಶ್ವವಾಣಿ ಸುದ್ದಿಮನೆ** ಬೆಂಗಳೂರು

ಸಾರಾಯಿ ನಿಷೇಧ ಮಾಡಿದ ನನ್ನ ಸರಕಾರ ಮದ್ಯದಂಗಡಿಗಳನ್ನು ತೆರೆಯಲು ಎಂದಿಗೂ ಅನುಮತಿ ಕೊಡುವುದಿಲ್ಲ, ಗಾಂಧಿ ಕಂಡ ಮದ್ಯಮುಕ್ತ ರಾಜ್ಯ ನನ್ನ ಕನಸು ಎಂದು ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ಹೇಳಿದ್ದಾರೆ.

ಬೆಂಗಳೂರಿನ ಗಾಂಧಿ ಭವನದಲ್ಲಿ ಆಯೋಜಿಸಿದ್ದ 150 ನೇ ಗಾಂಧಿ ಜಯಂತಿ ಆಚರಣೆಯಲ್ಲಿ ಪಾಲ್ಗೊಂಡು ಮಾತನಾಡಿದ ಅವರು,

ಕಳೆದ ವಾರ ಮಾಧ್ಯಮಗಳಲ್ಲಿ ಕುಮಾರಸ್ವಾಮಿಯವರದ್ದು ಎರಡು ಮುಖ ಎಂದು ಬಿಂಬಿಸಲಾಗಿತ್ತು. ಹಿಂದೆ ಸಾರಾಯಿ ನಿಷೇಧ ಮಾಡಿದ್ದವರು ಇದೀಗ ಬಾರ್ ತೆರೆಯಲು ಪರವಾನಗಿ . ನೀಡಲು ಹೊರಟಿದ್ದಾರೆ ಎಂಬ ವರದಿ ಬಿತ್ತರಿಸಿದ್ದರು. ನಾನು ಹಾಗೇ ಮಾಡಲು ಸಾಧ್ಯವೇ? ರಾಜ್ಯದಲ್ಲಿ ಲಾಟರಿ, ಸಾರಾಯಿ ನಿಷೇಧವಾಗಿದೆ. ಅಬಕಾರಿ ಇಲಾಖೆಯ ಕೆಲವು ಅಧಿಕಾರಿಗಳು ಈ ಬಗ್ಗೆ ಮಾಹಿತಿ ಕಲೆ ಹಾಕುವ ಕೆಲಸ ಮಾಡಿದ್ದಾರೆಯೇ ಹೊರತು ಪರವಾನಗಿ ನೀಡುವ ಕೆಲಸ ಮಾಡುವುದಿಲ್ಲ, ಆ ಬಗ್ಗೆ ಸರಕಾರ ಯಾವುದೇ ಚಿಂತನೆಯನ್ನೂ ನಡೆಸಿಲ್ಲ ಎಂದು ಸ್ಪಷ್ಟಪಡಿಸಿದರು.

ಗಾಂಧಿಜೀಯವರ ತತ್ವಗಳನ್ನು ಅನುಸರಿಸಬೇಕೆಂದು ನಾನು ರಾಜಕೀಯಕ್ಕೆ ಬಂದವನು. ಹಾಗೆಯೇ ನಡೆದುಕೊಳ್ಳುತ್ತಿದ್ದೇನೆ. ಮಧ್ಯರಾತ್ರಿ ಮಹಿಳೆಯೊಬ್ಬಳು ಯಾವುದೇ ಭೀತಿಯಿಲ್ಲದೇ ಓಡಾಡಬೇಕೆಂದು ಗಾಂಧಿಜಿಯವರು ಕನಸು ಕಂಡಿದ್ದರು. ಅವರ ಕನಸನ್ನು ಕರ್ನಾಟಕದಲ್ಲಿ ನನಸು ಮಾಡುವ ನಿಟ್ಟಿನಲ್ಲಿ ನಮ್ಮ ಸರಕಾರ ಹೆಜ್ಜೆ ಇಟ್ಟಿದೆ. ಬೆಂಗಳೂರನ್ನು ಶಾಂತಿಯುತ ನಗರವನ್ನಾಗಿಸುವುದಲ್ಲದೆ, ಇಡೀ ರಾಜ್ಯದ ಸಮಗ್ರ ಅಭಿವೃದ್ಧಿಗೆ ಸರಕಾರ ಪಣ ತೊಟ್ಟಿದೆ ಎಂದು ಹೇಳಿದರು.

ಸರಕಾರಕ್ಕೆ ನಿಮ್ಮ ಬೆಂಬಲವೇ ಶ್ರೀರಕ್ಷೆ. ನೀವು ತೆರಿಗೆ ಕಟ್ಟಿದ ಹಣ ಪೋಲು ಮಾಡದೇ ಜನರಿಗೆ ಅವಶ್ಯಕತೆ ಇರುವ. ಕೆಲಸ ಮಾಡುತ್ತಿದ್ದೇವೆ. ಬೆಂಗಳೂರು ನಗರದಲ್ಲಿ ಕ್ರೈಂ ರೇಟ್ ಕಡಿಮೆ ಮಾಡುವ ಸಲುವಾಗಿ ದಕ್ಷತೆ, ಪ್ರಾಮಾಣಿಕತೆಯಿಂದ ಕೆಲಸ ಮಾಡುವ ಒಳ್ಳೆಯ ಅಧಿಕಾರಗಳನ್ನು ಕರೆಸಿದ್ದೇನೆ. ಕೋಟಿ ಕೋಟಿ ಹಣ ಇಟ್ಟುಕೊಂಡು ಇಸ್ಪೀಟು ಆಡುತ್ತಿದ್ದ ಅಡ್ಡೆಗಳ ಮೇಲೆ ದಾಳಿ ನಡೆದಿದೆ. ಸಮಾಜಘಾತುಕ ಶಕ್ತಿಗಳನ್ನು ಮಟ್ಟ ಹಾಕಲೂ ಪೊಲೀಸರಿಗೆ ಪರಮಾಧಿಕಾರ ನೀಡಿದ್ದೇನೆ. ಕೆಟ್ಟ ದಾರಿಯಲ್ಲಿ ನಡೆಯುತ್ತಿರುವ ಪೋಲಿ ಪುಂಡರನ್ನು ನಿಯಂತ್ರಣಕ್ಕೆ ತರಲು ಸೂಚನೆ ನೀಡಿದ್ದೇನೆ ಎಂದು ತಿಳಿಸಿದರು.

**ಜನತಾದರ್ಶನ ಕಾಟಾಚಾರಕ್ಕಲ್ಲ:** ರಾಜ್ಯದ ಮುಖ್ಯಮಂತ್ರಿಯಾಗಿರುವ ನಾನು ರಾಜ್ಯದ ನಾಗರಿಕರ ಸಮಸ್ಯೆಗಳನ್ನ ಆಲಿಸುವ ಕಾರ್ಯಕ್ರಮ ಮಾಡುತ್ತಿದ್ದೇನೆ.- ಇದನ್ನು ನಾನು ಕಾಟಾಚಾರಕ್ಕೆ ಮಾಡುತ್ತಿಲ್ಲ. ಪ್ರತಿ ವಾರ ಜನರ ಸಮಸ್ಯೆಗಳನ್ನು ಆಲಿಸಿ ಕಷ್ಟಗಳಿಗೆ ಸ್ಪಂದಿಸುತ್ತಿದ್ದೇನೆ. ಸಾವಿರಾರು ಜನ ನಾನಾ ರೀತಿಯ ಕಷ್ಟ ಹೇಳಿಕೊಂಡು ಬರುತ್ತಿದ್ದಾರೆ. ಅವರ ಕಷ್ಟ ಪರಿಹರಿಸುವುದು ನನ್ನ ಕರ್ತವ್ಯ ಎಂದರು.

**12 ವರ್ಷದ ಹಿಂದಿನ ನೆನಪು ಮೆಲುಕು ಹಾಕಿದ ಸಿಎಂ** : ಬಾಪು ಅವರ 150ನೇ ಜನ್ಮ ದಿನಾಚರಣೆಯ ಕಾರ್ಯಕ್ರಮಲ್ಲಿ ಭಾಗಿಯಾಗಿದ್ದಕ್ಕೆ ನನಗೆ ತುಂಬಾ ಸಂತೋಷವಾಗಿದೆ. ರಾಜ್ಯ ಸರಕಾರ ಕೂಡ ಗಾಂಧಿ ಸ್ಮರಣಾರ್ಥ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. 12 ವರ್ಷದ ಹಿಂದೆ ನಾನು ಗಾಂಧಿ ಭವನಕ್ಕೆ ಬಂದಿದ್ದೆ. ಆಗ ಹೆಚ್ಚಿನ ಸಂಖ್ಯೆಯಲ್ಲಿ ಯುವಕರು ಬಂದಿರಲಿಲ್ಲ. ಈಗ ಸ್ವಲ್ಪ ಯುವಕರು ಬಂದಿದ್ದಾರೆ. ಆಗ ಗಾಂಧಿ ಭವನ ತುಂಬಾ ಅವ್ಯವಸ್ಥೆಯಾಗಿತ್ತು. ವಯಸ್ಸಾದವರು ಗಾಂಧಿ ಭವನಕ್ಕೆ ಬರುವುದು ತುಂಬಾ ಕಷ್ಟವಾಗುತ್ತಿತ್ತು. ಆಗ ಕೂಡಲೇ ಬಿಡಿಎ ಆಯುಕ್ತರನ್ನು ಕರೆಸಿ ನವೀಕರಣಕ್ಕೆ ಆದೇಶ ನೀಡಿ ಒಂದು ಕೋಟಿ ಅನುದಾನ ಬಿಡುಗಡೆ ಮಾಡಿದ್ದೆ. ಇಂದು ದೇಶದಲ್ಲಿ ಬೆಂಗಳೂರಿನಲ್ಲಿರುವ ಗಾಂಧಿ ಭವನ ಅಚ್ಚುಕಟ್ಟಾಗಿರಲು ಕಾರಣವಾಗಿದೆ ಎಂದು ನೆನಪಿಸಿಕೊಂಡರು.


ಮಹಾತ್ಮ ಗಾಂಧೀಜಿಯವರ 150 ನೇ ಜನ್ಮ ದಿನಾಚರಣೆ ಕಾರ್ಯಕ್ರಮದಲ್ಲಿ ಮುಖ್ಯಮಂತ್ರಿ ಕುಮಾರಸ್ವಾಮಿ ಗಾಂಧಿ ಪ್ರತಿಮೆಗೆ ಪುಷ್ಪಾರ್ಚನೆ ಮಾಡಿದರು. ಈ ವೇಳೆ ಮಾಜಿ ಸಚಿವ ಎಚ್.ಕೆ.ಪಾಟೀಲ್ ಸೇರಿದಂತೆ ಮತ್ತಿತರರು ಇದ್ದರು.

## ಜಿಲ್ಲೆಗೊಂದು ಗಾಂಧಿ ಭವನ

ರಾಜ್ಯದ 30 ಜಿಲ್ಲೆಗಳಲ್ಲಿ ಗಾಂಧಿಭವನ ನಿರ್ಮಾಣಕ್ಕೆ ಚಿಂತನೆ ನಡೆದಿದ್ದು, ಕೆಲವೆಡೆ ಸ್ಥಳ ನಿಗದಿಯಾಗಿದೆ. ಕೆಲವು ಕಡೆ ಜಾಗಗಳನ್ನ ಗುರುತಿಸಲಾಗಿದೆ. ಬರೀ ಭವನ ನಿರ್ಮಾಣ ಮಾಡುವುದಷ್ಟೇ ಗಾಂಧಿಭವನದಲ್ಲಿ ದಿನಕ್ಕೊಂದು ಕಾರ್ಯಕ್ರಮ ನಡೆಸುವ ಚಿಂತನೆಯಿದ್ದು, ಈ ಮೂಲಕ ಗಾಂಧಿಯವರ ಚಿಂತನೆಯನ್ನು ಮುಂದಿನ ಪೀಳಿಗೆಗೆ ತಿಳಿಸುವ ಕೆಲಸವನ್ನು ಕೂಡ ಮಾಡಲಾಗುತ್ತದೆ ಎಂದು ತಿಳಿಸಿದರು.ಮಾಜಿ ಸಚಿವ ಎಚ್.ಕೆ.ಪಾಟೀಲ್, ಕೇಂದ್ರ ಮಾಜಿ ಸಚಿವ ಎಂ.ವಿ. ರಾಜಶೇಖರನ್ ಸೇರಿದಂತೆ ವಿವಿಧ ಗಣ್ಯರು ಕಾರ್ಯಕ್ರಮದಲ್ಲಿ ಭಾಗಿಯಾಗಿದ್ದರು.

ಸಂಜೆವಾಣಿ

ಮಂಗಳವಾರ 2
ಟೋಬರ್ 2018



ನಗರದ ಗಾಂಧಿ ಭವನದಲ್ಲಿ ಇಂದು ಏರ್ಪಡಿಸಿದ್ದ ಗಾಂಧಿ ಜಯಂತಿ ಕಾರ್ಯಕ್ರಮದಲ್ಲಿ ಮುಖ್ಯಮಂತ್ರಿ ಹೆಚ್.ಡಿ.ಕುಮಾರಸ್ವಾಮಿಯವರು ಸೇವಾ ಯೋಜನೆಯ ಲೋಗೋವನ್ನು ಅನಾವರಣ ಮಾಡಿದರು. ಮಾಜಿ ಸಚಿವ ಹೆಚ್.ಕೆ.ಪಾಟೀಲ್, ಮಾಜಿ ಕೇಂದ್ರ ಸಚಿವ ಎಂ.ವಿ.ರಾಜಶೇಖರನ್, ಅಧ್ಯಕ್ಷ ವೂಡೇ ಪಿ.ಕೃಷ್ಣ ಮತ್ತಿತರರು ಭಾಗವಹಿಸಿದ್ದರು.

# ರಾಜ್ಯದ ಪ್ರತಿ ಜಿಲ್ಲೆಗಳಲ್ಲಿ ಗಾಂಧಿ ಭವನ ನಿರ್ಮಾಣ

ಮಾತನಾಡಿದ ಮುಖ್ಯಮಂತ್ರಿಗಳು ಜಿಲ್ಲಾ ಕೇಂದ್ರಗಳಲ್ಲಿ ಗಾಂಧಿಭವನಗಳಲ್ಲಿಯುವಕರಿಗೆ ಕೌಶಲ್ಯ ಅಭಿವೃದ್ಧಿ ತರಬೇತಿಗಳನ್ನು ನೀಡುವ ಬಗ್ಗೆ ಸರ್ಕಾರ ಚಿಂತನೆ ನಡೆಸಿದೆಯೆಂದು ಅವರು ತಿಳಿಸಿದರು.

12 ವರ್ಷಗಳ ಹಿಂದೆ ಗಾಂಧಿ ಭವನಕ್ಕೆ ಭೇಟಿನೀಡಿದಾಗ ಇಡೀ ಭವನದಲ್ಲಿ ಗಾರೆ ಕಿತ್ತುಹೋಗಿದ್ದವು.ತಕ್ಷಣವೇ ಬಿಡಿಎ ಆಯುಕ್ತರನ್ನು ಕರೆಸಿ 1 ಕೋಟಿ ರೂಪಾಯಿ ವೆಚ್ಚದಲ್ಲಿ ಗಾಂಧಿ ಭವನವನ್ನು ನವೀಕರಿಸುವಂತೆ ಆದೇಶ ನೀಡಿದ್ದೆ. ಸರ್ಕಾರ ಮತ್ತು ಜನಪ್ರತಿನಿಧಿಗಳ ಸಹಕಾರದೊಂದಿಗೆ ಗಾಂಧಿಭವನ ಸುಸಜ್ಜಿತವಾಗಿ ನಿರ್ಮಾಣಗೊಂಡಿದೆ ಎಂದು ಹರ್ಷ ವ್ಯಕ್ತಪಡಿಸಿದರು.

ಮಹಾತ್ಮಗಾಂಧೀಜಿಯವರೇ ಹೇಳುವಂತೆ ಇಂದು ರಾಜಕೀಯ ಸ್ವಾತಂತ್ರವಷ್ಟೇ ಬಂದಿದೆ. ಆದರೆ ಸಾಮಾಜಿಕ, ಆರ್ಥಿಕ ಸ್ವಾತಂತ್ರಗಳು ಸಿಕ್ಕಿಲ್ಲ. ಮೈತ್ರಿ ಸರ್ಕಾರದಲ್ಲಿ ಗಾಂಧೀಜಿಯವರ ಆದರ್ಶಗಳನ್ನು ಅನುಷ್ಠಾನಕ್ಕೆ ತಂದು ನಗರ ಪ್ರದೇಶ ಸೇರಿದಂತೆ ಹಳ್ಳಿಗರ ಬದುಕನ್ನು ಉತ್ತಮಗೊಳಿಸುವ ಬಗ್ಗೆ ಕಾರ್ಯಕ್ರಮಗಳನ್ನು ರೂಪಿಸಲಾಗುವುದು ಎಂದು ಮುಖ್ಯಮಂತ್ರಿ ಹೆಚ್.ಡಿ.ಕುಮಾರಸ್ವಾಮಿ ಅವರು ತಿಳಿಸಿದರು. ನಾನು ರಾಜಕಾರಣಕ್ಕೆ ಬಂದಿದ್ದು ಆಕಸ್ಮಿಕ.ಮಹಾತ್ಮಗಾಂಧೀಜಿಯವರ ಮಾರ್ಗದರ್ಶನದಂತೆಯೇ ನಡೆದುಕೊಳ್ಳುತ್ತಿದ್ದೇನೆ. ಗ್ರಾಮ ವಾಸ್ತವ್ಯ ಜನತಾ ದರ್ಶನದಂತಹ ಕಾರ್ಯಕ್ರಮಗಳನ್ನು ರೂಪಿಸಿ.ಎಲ್ಲಾ ನಾಗರಿಕ ಸಮಸ್ಯೆಗಳನ್ನು ಬಗೆಹರಿಸುವ ಪ್ರಯತ್ನ ನಡೆಸಿದ್ದೇನೆ ಎಂದು ತಿಳಿಸಿದರು.

ಸಮಾರಂಭದಲ್ಲಿ ಪ್ರಾಸ್ತಾವಿಕ ಭಾಷಣ ಮಾಡಿದ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಅವರು ಭ್ರಷ್ಟಚಾರ, ಬಡತನ, ಭಯೋತ್ಪಾದನೆ ವಿರುದ್ಧ ಯುವ ಸಮುದಾಯವನ್ನು ಸಜ್ಜುಗೊಳಿಸಬೇಕಿದೆ ಎಂದು ಹೇಳಿದರು.

ಪಂಚಾಯತ್ ರಾಜ್ಯ ಕಾಯ್ದೆಗೆ ಇನ್ನಷ್ಟು ಬಲತುಂಬುವ ಅಗತ್ಯವಿದೆ.ಮುಖ್ಯಮಂತ್ರಿ ಹೆಚ್.ಡಿ. ಕುಮಾರಸ್ವಾಮಿ ಅವರು ಈ ಬಗ್ಗೆ ಹೆಚ್ಚು ಗಮನಹರಿಸಬೇಕೆಂದು ಮನವಿ ಮಾಡಿದರು.

ಸಮಾರಂಭದಲ್ಲಿ ಮಾಜಿ ಸಚಿವ ಹೆಚ್. ಕೆ. ಪಾಟೀಲ್, ಕೇಂದ್ರದ ಮಾಜಿ ಸಚಿವ ಎಂ.ವಿ. ರಾಜಶೇಖರ್ ಅವರು ಗಾಂಧಿ ಸೇವಾ ಪ್ರಶಸ್ತಿ ಪುರಸ್ಕೃತ ಚೆನ್ನಮ್ಮ ಹಳ್ಳಿಕೇರಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ನಿರ್ದೇಶಕ ಎನ್. ಆರ್. ವಿಶುಕುಮಾರ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಮತ್ತಿತರರು ಉಪಸ್ಥಿತರಿದ್ದರು.

## ಆತ್ಮಹತ್ಯೆಗೆ ಶರಣಾಗದಿರಿ ಸಿಎಂ ಮನವಿ

...ಯಿದೆ. ಹಳ್ಳಿ ನಗರ ಎನ್ನದೇ ಪ್ರತಿ ಕುಟುಂಬದವರನ್ನು ರಕ್ಷಿಸಲು ಋಣಮುಕ್ತ ಕಾಯ್ದೆಯನ್ನು ರಾಷ್ಟ್ರಪತಿಗಳ ಅಂಗೀಕಾರಕ್ಕಾಗಿ ಕಳುಹಿಸಲಾಗಿದೆ ಎಂದು ಹೇಳಿದರು.

ಮುಖ್ಯಮಂತ್ರಿ ಹೆಚ್.ಡಿ.ಕುಮಾರಸ್ವಾಮಿ ಅವರಿಗೆ 2 ಮುಖಗಳಿವೆ ಎಂದು ಮಾಧ್ಯಮದವರು ಟೀಕಿಸುತ್ತಾರೆ. ಸಾರಾಯಿ ನಿಷೇಧದ ಬಗ್ಗೆ ಸರ್ಕಾರದ ಮುಂದೆ ಯಾವುದೇ ಪ್ರಸ್ತಾಪ ಬಂದಿಲ್ಲ. ಜನಸಂಖ್ಯೆಯ ಆಧಾರದ ಮೇಲೆ ಇಲಾಖಾ ಅಧಿಕಾರಿಗಳು ನಿಯಮವನ್ನು ರೂಪಿಸಿ, ಜಾರಿ ತರಲು ಮುಂದಾಗಿದ್ದಾರೆ ಎಂದು ಸ್ಪಷ್ಟನೆ ನೀಡಿದ್ದರು.

ವಿಜಯ ಕರ್ನಾಟಕ
ಮಂಗಳವಾರ,2 ಅಕ್ಟೋಬರ್ 2018



ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯು ನಗರದ ಶೇಷಾದ್ರಿಪುರ ಪದವಿ ಕಾಲೇಜು ಸಭಾಂಗಣದಲ್ಲಿ ಸೋಮವಾರ ಆಯೋಜಿಸಿದ್ದ ರಾಷ್ಟ್ರೀಯ ಸ್ವಯಂ ಪ್ರೇರಿತ ರಕ್ತದಾನ ದಿನಾಚರಣೆ ಕಾರ್ಯಕ್ರಮವನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಉದ್ಘಾಟಿಸಿದರು.



ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಶೇಷಾದ್ರಿಪುರ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ರಾಷ್ಟ್ರೀಯ ಸ್ವಯಂ ಪ್ರೇರಿತ ರಕ್ತದಾನ ದಿನಾಚರಣೆಯಲ್ಲಿ ಗಾಂಧಿ ಸ್ಮಾರಕ ಟ್ರಸ್ಟ್ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ರೆಡ್ ಕ್ರಾಸ್ ಸಂಸ್ಥೆಯ ಸಭಾಪತಿ ಬಸ್ರೂರು ರಾಜೀವ್ ಶೆಟ್ಟಿ, ಉಪಾಧ್ಯಕ್ಷ ಡಾ.ಎಂ.ಕೆ.ಶ್ರೀಧರ್, ರಾಜು ಚಂದ್ರಶೇಖರ್, ಬಾಲಕೃಷ್ಣ ಶೆಟ್ಟಿ, ಡಾ.ಲಯನ್ ಶ್ಯಾಮಸುಂದರ್ ಮತ್ತಿತರರು ಪಾಲ್ಗೊಂಡಿದ್ದರು.

ಈ ಸಂಜೆ

ಮಂಗಳವಾರ, 2 ಅಕ್ಟೋಬರ್ 2018

# ಪ್ರತಿ ಜಿಲ್ಲೆಯಲ್ಲೂ ಗಾಂಧಿ ಭವನ ನಿರ್ಮಾಣ



ಬೆಂಗಳೂರು, ಅ.2-ರಾಜ್ಯದ 30 ಜಿಲ್ಲೆಗಳಲ್ಲೂ ಗಾಂಧಿ ಭವನ ನಿರ್ಮಿಸಲು ಕ್ರಮಕೈಗೊಳ್ಳುವುದಾಗಿ ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ಹೇಳಿದರು.

ನಗರದ ಗಾಂಧಿಭವನದಲ್ಲಿ ಮಹಾತ್ಮಗಾಂಧೀಜಿಯವರ 150ನೇ ಜನ್ಮ ದಿನಾಚರಣೆ ಅಂಗವಾಗಿ ಛಾಯಾಚಿತ್ರ ಪ್ರದರ್ಶನ ಹಾಗೂ ಇತರ ಕಾರ್ಯಕ್ರಮಗಳನ್ನು ಉದ್ಘಾಟಿಸಿ ಮಾತನಾಡಿದ ಅವರು, ಗಾಂಧಿ ಭವನ ನಿರ್ಮಿಸಲು ಕೆಲವು ಜಿಲ್ಲೆಗಳಲ್ಲಿ ಜಾಗಗಳನ್ನು ಗುರುತಿಸಲಾಗಿದೆ. ಇನ್ನೂ ಕೆಲವು ಜಿಲ್ಲೆಗಳಲ್ಲಿ ಜಾಗ ಸಿಗಬೇಕಿದೆ. ನಮ್ಮ ಸರ್ಕಾರ ಜಾಗ ಒದಗಿಸಿ 30 ಜಿಲ್ಲೆಗಳಲ್ಲೂ ಗಾಂಧಿಭವನ ನಿರ್ಮಿಸಲು ಕ್ರಮ ಕೈಗೊಳ್ಳಲಿದೆ ಎಂದು ಹೇಳಿದರು.

ಗಾಂಧಿ ಕನಸು ನನಸಿಗೆ ಪ್ರಯತ್ನ: ಮಧ್ಯರಾತ್ರಿ ಮಹಿಳೆಯೊಬ್ಬರು ನಿರ್ಭೀತಿಯಿಂದ ಓಡಾಡುವಂತಹ ವಾತಾವರಣ ನಿರ್ಮಾಣವಾಗಬೇಕು ಎಂಬುದು ಗಾಂಧೀಜಿಯವರ ಕನಸಾಗಿತ್ತು. ಕರ್ನಾಟಕದಲ್ಲಿ ಆ ಕನಸನ್ನು ನನಸು ಮಾಡಲು ನಾನು ಹೆಜ್ಜೆ ಇಟ್ಟಿದ್ದೇನೆ. ಜನರು ನೆಮ್ಮದಿಯಿಂದ ಜೀವಿಸಬೇಕಾದರೆ ಕಾನೂನು ಬಾಹಿರ ಚಟುವಟಿಕೆಗಳಿಗೆ ಕಡಿವಾಣ ಹಾಕಬೇಕು, ಮಾಫಿಯಾಗಳನ್ನು ಮಟ್ಟಹಾಕಬೇಕು. ಅದಕ್ಕಾಗಿ ನಾನು ಕೆಲವು ಖಡಕ್ ಪೊಲೀಸ್ ಅಧಿಕಾರಿಗಳನ್ನು ಬೆಂಗಳೂರಿಗೆ ನಿಯೋಜನೆ ಮಾಡಿದ್ದೇನೆ. ಯಾವುದೇ ಒತ್ತಡಕ್ಕೆ ಮಣಿಯದಂತೆ ಜನರ ನೆಮ್ಮದಿಗಾಗಿ ಕೆಲಸ ಮಾಡಲು ಸೂಚನೆ ನೀಡಿದ್ದೇನೆ. ಒಂದು ವೇಳೆ ನಾನೇ ಕರೆ ಮಾಡಿ ಹೇಳಿದರೂ ನೀವು ತೆಗೆದುಕೊಂಡ ಕ್ರಮಗಳನ್ನು ಕೈ ಬಿಡಬೇಡಿ ಎಂದು ಪೊಲೀಸರಿಗೆ ಸೂಚನೆ ನೀಡಿದ್ದೇನೆ. ಹೆಣ್ಣುಮಕ್ಕಳ ರಕ್ಷಣೆ ನಮ್ಮ ಮೊದಲ ಆದ್ಯತೆ. ಮೈತ್ರಿ ಸರ್ಕಾರ ಈ ನಿಟ್ಟಿನಲ್ಲಿ ಸದಾ ನಿಮ್ಮ ಜೊತೆಗಿದೆ ಎಂದು ಕುಮಾರಸ್ವಾಮಿ ಹೇಳಿದರು.

ಕೋಟಿ ಕೋಟಿ ಹಣವನ್ನು ಇಟ್ಟು ಇಸ್ಪೀಟ್ ಆಡುತ್ತಿದ್ದಾರೆ. ಅವುಗಳನ್ನೆಲ್ಲ ನಿಯಂತ್ರಣ ಮಾಡಲು ಸೂಚಿಸಿದ್ದೇನೆ. ಅಪರಾಧ ಚಟುವಟಿಕೆಗಳನ್ನು ಸಂಪೂರ್ಣ ಮಟ್ಟ ಹಾಕಲು ತಾಕೀತು ಮಾಡಿದ್ದೇನೆ. ಎಷ್ಟೇ ಖರ್ಚಾದರೂ ಚಿಂತೆಯಿಲ್ಲ. ಬೆಂಗಳೂರಿನ ಪ್ರತಿಯೊಂದು ರಸ್ತೆಯಲ್ಲೂ ಸಿಸಿ ಟಿವಿ ಅಳವಡಿಸಲಾಗುತ್ತದೆ. ಇತರ ನಗರಗಳಲ್ಲೂ ಭದ್ರತೆಗಾಗಿ ಸಿಸಿ ಟಿವಿ ಕ್ಯಾಮೆರಾ ಅಳವಡಿಸಲಾಗುವುದು, ಜನರ ಭದ್ರತೆ ನಮ್ಮ ಸರ್ಕಾರದ ಮುಖ್ಯ ಧ್ಯೇಯ ಎಂದು ಹೇಳಿದರು.

ಈ ಹಿಂದಿನ ಸಮ್ಮಿಶ್ರ ಸರ್ಕಾರದಲ್ಲಿ ಸಾರಾಯಿ ನಿಷೇಧ ಮಾಡುವ ಕಠಿಣ ನಿರ್ಧಾರ ತೆಗೆದುಕೊಂಡವನು ನಾನು. ಪ್ರಸ್ತುತ ಸಂದರ್ಭದಲ್ಲಿ ಬಾರ್ ಲೈಸೆನ್ಸ್ ಕೊಡಲು ಸೂಚಿಸಿದ್ದೇನೆ ಎಂಬ ವರದಿಗಳಾಗಿವೆ. ಮಾಧ್ಯಮಗಳು ಕುಮಾರಸ್ವಾಮಿಯವರಿಗೆ ಎರಡು ಮುಖಗಳಿವೆ ಎಂದು ಬಿಂಬಿಸುತ್ತಿವೆ. ನಾನು ಯಾವುದೇ ಕಾರಣಕ್ಕೂ ಹೊಸ ಬಾರ್‌ಗಳಿಗೆ ಲೈಸೆನ್ಸ್ ಕೊಡುವುದಿಲ್ಲ. ಅಧಿಕಾರಿಗಳು ಜನಸಂಖ್ಯೆಗನುಗುಣವಾಗಿ ಲೆಕ್ಕಾಚಾರ ಹಾಕಿ ಹೊಸ ಬಾರ್ ಲೈಸೆನ್ಸ್ ಕೊಡಲು ಚಿಂತನೆ ನಡೆಸಿದ್ದರು. ಆದರೆ ಆ ಪ್ರಸ್ತಾವನೆ ನನ್ನ ಮುಂದೆ ಬಂದಿಲ್ಲ, ಬಂದರೂ ಅವಕಾಶ ಕೊಡುವುದಿಲ್ಲ. ಮಾಧ್ಯಮಗಳು ಸತ್ಯಾಸತ್ಯತೆಯನ್ನು ಅರಿತು ಕೊಂಡು ವರದಿ ಮಾಡಬೇಕು ಎಂದು ಸಲಹೆ ನೀಡಿದರು.

ಜನರ ತೆರಿಗೆ ಹಣವನ್ನು ಪೋಲು ಮಾಡದೆ ದಕ್ಷತೆಯಿಂದ ಕೆಲಸ ಮಾಡಲು ನಮ್ಮ ಸರ್ಕಾರ ಪಣತೊಟ್ಟಿದೆ. ಅದಕ್ಕೆ ನಿಮ್ಮ ಸಹಕಾರ ಮತ್ತು ಶ್ರೀರಕ್ಷೆ ಬೇಕು ಎಂದರು.

ಗಾಂಧೀಜಿಯವರ 150ನೇ ಜನ್ಮದಿನಾಚರಣೆಯಲ್ಲಿ ಮುಖ್ಯಮಂತ್ರಿಯಾಗಿ ಭಾಗಿಯಾಗುತ್ತಿರುವುದಕ್ಕೆ ಸಂತೋಷವಾಗುತ್ತಿದೆ. 12 ವರ್ಷಗಳ ಹಿಂದೆ ಮುಖ್ಯಮಂತ್ರಿಯಾಗಿ ಇಲ್ಲಿಗೆ ಬಂದಿದ್ದೆ. ಆ ಸಂದರ್ಭದಲ್ಲಿ ಇಂತಹ ಕಾರ್ಯಕ್ರಮದಲ್ಲಿ ಯುವಕರು ಭಾಗವಹಿಸುತ್ತಿರಲಿಲ್ಲ, ಇಂದು ಹೆಚ್ಚಿನ ಸಂಖ್ಯೆಯಲ್ಲಿ ಯುವಕರಿದ್ದಾರೆ. ಇದು ಮತ್ತಷ್ಟು ಸಂತೋಷ ಹೆಚ್ಚಿಸಿದೆ. ಈ ಹಿಂದೆ ಗಾಂಧಿ ಭವನ ಅವ್ಯವಸ್ಥೆಯಿಂದ ಕೂಡಿತ್ತು. ವಯಸ್ಸಾದವರಿಗೆ ಗಾಂಧಿ ಭವನಕ್ಕೆ ಬರಲು ಕಷ್ಟವಾಗುತ್ತಿತ್ತು. ಅದನ್ನು ಮನಗಂಡು ಕೂಡಲೇ ದುರಸ್ತಿ ಮಾಡುವಂತೆ ಬಿಡಿಎ ಆಯುಕ್ತರಿಗೆ ಸೂಚನೆ ನೀಡಿದ್ದೆ. ಅದಕ್ಕಾಗಿ ಒಂದು ಕೋಟಿ ರೂ. ಅನುದಾನವನ್ನೂ ಬಿಡುಗಡೆ ಮಾಡಿದ್ದೆ. ಗಾಂಧಿ ಭವನ ಈಗ ಉತ್ತಮ ಸ್ಥಿತಿಯಲ್ಲಿದೆ. ಇಲ್ಲಿ ಪ್ರತಿದಿನವೂ ಒಂದೊಂದು ಚಟುವಟಿಕೆಗಳು ನಡೆಯಬೇಕು ಎಂಬುದು ನನ್ನ ಆಶಯ ಎಂದರು.

ಕಾರ್ಯಕ್ರಮದಲ್ಲಿ ಕೇಂದ್ರ ಮಾಜಿ ಸಚಿವ ಎಂ.ವಿ.ರಾಜಶೇಖರನ್, ರಾಜ್ಯ ಮಾಜಿ ಸಚಿವರಾದ ಎಚ್.ಕೆ.ಪಾಟೀಲ್, ಮುಖಂಡರಾದ ವೂಡೇ ಪಿ.ಕೃಷ್ಣ ಇಂದಿರಾ ಕೃಷ್ಣಪ್ಪ ಮತ್ತಿತರರು ಭಾಗವಹಿಸಿದ್ದರು.

ಸಾಹಿತಿ ಬೊಳುವಾರು ಮಹಮ್ಮದ್ ಕುಂಞ ಅವರಿಗೆ ಪ್ರಶಸ್ತಿ ನೀಡಿ ಸನ್ಮಾನಿಸಲಾಯಿತು.

ಈ ಸಂಜೆ
ಶನಿವಾರ, 29-09-2018



ಲಾಸ್ಯ ಸಾಂಸ್ಕೃತಿಕ ಪ್ರತಿಷ್ಠಾನ ಶೇಷಾದ್ರಿಪುರ ಪ್ರೌಢ ಶಾಲೆಯಲ್ಲಿ ಹಮ್ಮಿಕೊಂಡಿದ್ದ ಗೀತಗಾಯನ, ಕವಿಗೋಷ್ಠಿ, ಸನ್ಮಾನ ಹಾಗೂ ಅರಳು ಪ್ರತಿಭೆ ಪ್ರಶಸ್ತಿ ಪ್ರದಾನ ಸಮಾರಂಭವನ್ನು ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೂಡೆ ಪಿ. ಕೃಷ್ಣ ಉದ್ಘಾಟಿಸಿದರು. ಸಾಹಿತಿ ಡಾ.ಕೆ.ಷರೀಫ, ಅಂಬುಜಾಕ್ಷಿ, ಉಪನ್ಯಾಸಕ ರಾಮಲಿಂಗೇಶ್ವರ, ಏಕಾಂಬರೇಶ್ವರ್ ಸೇರಿದಂತೆ ಮತ್ತಿತರರು ಭಾಗವಹಿಸಿದ್ದರು.

ಸಂಯುಕ್ತ ಕರ್ನಾಟಕ
28, ಸೆಪ್ಟೆಂಬರ್, 2018 । ಶುಕ್ರವಾರ



ಬೆಂಗಳೂರು ಬ್ರಹ್ಮ ಸಮಾಜ ಹಾಗೂ ಅನಕೃ ಕನ್ನಡ ಸಂಘ ಏರ್ಪಡಿಸಿದ್ದ ರಾಜಾರಾಂ ಮೋಹನ್ ರಾಯ್ ಪುಣ್ಯ ಸ್ಮರಣೆ ಕಾರ್ಯಕ್ರಮದಲ್ಲಿ ಡಾ. ಶೀಲಾದೇವಿ ಎಸ್. ಮಳೀಮಠ, ವೂಡೆ ಪಿ. ಕೃಷ್ಣ, ಶೋಭಿನಿ ಗುರುದಾಸ್, ರಾಣಿ ಗೋವಿಂದರಾಜು ಮತ್ತಿತರರಿದ್ದರು.

ಕನ್ನಡಪ್ರಭ
ಬುಧವಾರ 26.9.2018
ಬೆಂಗಳೂರು

ಸಣ್ಣ ಸುದ್ದಿ

# ರಂಗಕರ್ಮಿ ಪ್ರಸನ್ನಗೆ ಗಾಂಧಿ ಸೇವಾ ಪ್ರಶಸ್ತಿ



ಬೆಂಗಳೂರು: ಪ್ರಸಕ್ತ 2018ನೇ ಸಾಲಿನ ಪ್ರತಿಷ್ಠಿತ 'ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ'ಗೆ ರಂಗಕರ್ಮಿ ಹೆಗ್ಗೋಡು ಪ್ರಸನ್ನ ಅವರನ್ನು ಆಯ್ಕೆ ಮಾಡಲಾಗಿದೆ ಎಂದು ಮುಖ್ಯಮಂತ್ರಿ ಎಚ್.ಡಿ. ಕುಮಾರಸ್ವಾಮಿ ತಿಳಿಸಿದ್ದಾರೆ. ಗೃಹ ಕಚೇರಿ ಕೃಷ್ಣಾದಲ್ಲಿ ಮಂಗಳವಾರ ಮಾತನಾಡಿದ ಅವರು, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯಿಂದ ನೀಡಲಾಗುವ ಈ ಪ್ರಶಸ್ತಿ ಐದು ಲಕ್ಷ ರು. ನಗದು ಬಹುಮಾನ ಒಳಗೊಂಡಿದೆ. ಗಾಂಧೀ ಜಯಂತಿಯಂದು ರವೀಂದ್ರ ಕಲಾಕ್ಷೇತ್ರದಲ್ಲಿ ನಡೆಯಲಿರುವ ಸಮಾರಂಭದಲ್ಲಿ ಪ್ರಶಸ್ತಿ ಪ್ರದಾನ ಮಾಡಲಾಗುವುದು ಎಂದು ತಿಳಿಸಿದರು. ಸುಪ್ರೀಂಕೋರ್ಟ್ ನಿವೃತ್ತ ನ್ಯಾಯಮೂರ್ತಿ ಗೋಪಾಲಗೌಡ ಅವರ ಅಧ್ಯಕ್ಷತೆಯ ಸಮಿತಿಯು ಪ್ರಸನ್ನ ಅವರನ್ನು ಪ್ರಶಸ್ತಿಗೆ ಆಯ್ಕೆ ಮಾಡಿದೆ. ಸಂಯುಕ್ತ ಕರ್ನಾಟಕ ಪತ್ರಿಕೆ ಸಂಪಾದಕ ಹುಣಸವಾಡಿ ರಾಜನ್, ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಸಮಿತಿಯ ಸದಸ್ಯರಾಗಿದ್ದು, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ನಿರ್ದೇಶಕ ಎನ್.ಆರ್. ವಿಶುಕುಮಾರ್ ಸದಸ್ಯ ಕಾರ್ಯದರ್ಶಿಗಳಾಗಿದ್ದಾರೆ ಎಂದರು.

ಸಂಯುಕ್ತ ಕರ್ನಾಟಕ

ಬುಧವಾರ, 26, ಸೆಪ್ಟೆಂಬರ್, 2018

# ಪ್ರಸನ್ನಗೆ ಗಾಂಧಿ ಸೇವಾ ಪ್ರಶಸ್ತಿ

**ಸಂ.ಕ. ಸಮಾಚಾರ ಬೆಂಗಳೂರು:** ರಾಜ್ಯ ಸರ್ಕಾರದ ಪ್ರತಿಷ್ಠಿತ ಮಹಾತ್ಮಾಗಾಂಧಿ ಸೇವಾ ಪ್ರಶಸ್ತಿಗೆ 2018ನೇ ಸಾಲಿಗೆ ರಂಗಕರ್ಮಿ ಹೆಗ್ಗೋಡು ಪ್ರಸನ್ನ ಅವರನ್ನು ಆಯ್ಕೆ ಮಾಡಲಾಗಿದೆ.



5 ಲಕ್ಷ ರೂ. ಮೊತ್ತದ ಪ್ರಶಸ್ತಿ ಆಯ್ಕೆಗಾಗಿ ನಿವೃತ್ತ ನ್ಯಾಯಮೂರ್ತಿ ಗೋಪಾಲಗೌಡ ನೇತೃತ್ವದಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆಯ ಪ್ರಧಾನ ಸಂಪಾದಕ ಹುಣಸವಾಡಿ ರಾಜನ್, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ. ಕೃಷ್ಣ ಅವರುಗಳ ಸಮಿತಿಯನ್ನು ನೇಮಕ ಮಾಡಲಾಗಿತ್ತು. ಈ ಸಮಿತಿಗೆ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ನಿರ್ದೇಶಕ ಎನ್.ಆರ್. ವಿಶುಕುಮಾರ್ ಸದಸ್ಯ ಕಾರ್ಯದರ್ಶಿಗಳಾಗಿದ್ದರು.

ಪ್ರಶಸ್ತಿಗೆ ಆಯ್ಕೆ ಮಾಡಿರುವುದನ್ನು ಮುಖ್ಯಮಂತ್ರಿ ಎಚ್.ಡಿ. ಕುಮಾರಸ್ವಾಮಿ ಪ್ರಕಟಿಸಿದರು. ಅ.2ರಂದು ಪ್ರಶಸ್ತಿ ಪ್ರದಾನ ಸಮಾರಂಭ ನಡೆಯಲಿದೆ.

ಉದಯವಾಣಿ ಬುಧವಾರ, ಸೆಪ್ಟೆಂಬರ್ 26, 2018

# ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿಗೆ ಪ್ರಸನ್ನ ಭಾಜನ

ಬೆಂಗಳೂರು: ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ ನೀಡಲಾಗುವ ಪ್ರತಿಷ್ಠಿತ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿಗೆ ರಂಗಕರ್ಮಿ ಹೆಗ್ಗೋಡು ಪ್ರಸನ್ನ ಆಯ್ಕೆಯಾಗಿದ್ದಾರೆ. ಗೃಹ ಕಚೇರಿ 'ಕೃಷ್ಣಾ'ದಲ್ಲಿ ಮಂಗಳವಾರ ಈ ಬಗ್ಗೆ ಮಾಹಿತಿ ನೀಡಿದ ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ, '2018ನೇ ಸಾಲಿನ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿಗೆ



ರಂಗಕರ್ಮಿ ಎಚ್. ಪ್ರಸನ್ನರನ್ನು ಆಯ್ಕೆ ಮಾಡಲಾಗಿದೆ. ಸುಪ್ರೀಂ ಕೋರ್ಟ್‌ನ ನಿವೃತ್ತ ನ್ಯಾಯಮೂರ್ತಿ ವಿ.ಗೋಪಾಲಗೌಡ ಅಧ್ಯಕ್ಷತೆ ಸಮಿತಿ ಶಿಫಾರಸಿನಂತೆ ಪ್ರಸನ್ನರನ್ನು ಆಯ್ಕೆ ಮಾಡಲಾಗಿದೆ ಎಂದು ತಿಳಿಸಿದರು. ಹಿರಿಯ ಪತ್ರಕರ್ತ ಹುಣಸವಾಡಿ ರಾಜನ್, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ.ಕೃಷ್ಣ ಸದಸ್ಯರಾಗಿದ್ದ ಹಾಗೂ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ನಿರ್ದೇಶಕ ಎನ್.ಆರ್.ವಿಶುಕುಮಾರ್ ಸದಸ್ಯ ಕಾರ್ಯದರ್ಶಿಯಾಗಿದ್ದ ಸಮಿತಿ ಎರಡು ಬಾರಿ ಸಭೆ ನಡೆಸಿ ಶಿಫಾರಸು ಮಾಡಿದೆ. ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ವತಿಯಿಂದ ನೀಡಲಾಗುವ ಪ್ರಶಸ್ತಿಯು ಐದು ಲಕ್ಷ ರೂ. ನಗದು ಪುರಸ್ಕಾರ ಒಳಗೊಂಡಿದೆ. ಗಾಂಧಿ ಜಯಂತಿ ದಿನದಂದು ರವೀಂದ್ರ ಕಲಾಕ್ಷೇತ್ರದಲ್ಲಿ ಪ್ರಶಸ್ತಿ ಪ್ರದಾನ ಸಮಾರಂಭ ನಡೆಯಲಿದೆ ಎಂದು ಹೇಳಿದರು.

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ
ಕನ್ನಡಿಗರ ಧ್ವನಿ

ಮಂಗಳವಾರ 25 ಸೆಪ್ಟೆಂಬರ್ 2018
VIJAYAVANI » 25 SEPTEMBER 2018

## 27ರಂದು ಕಸಾಪದಲ್ಲಿ ರಾಜಾರಾಮ ಮೋಹನರಾಯ್ ಪುಣ್ಯಸ್ಮರಣೆ, ಕಾವ್ಯನಮನ



ಬೆಂಗಳೂರು ಬ್ರಹ್ಮ ಸಮಾಜ; ಅನೇಕ ಕನ್ನಡ ಸಂಘಗಳ ಸಂಯುಕ್ತ ಆಶ್ರಯದಲ್ಲಿ ಗುರುವಾರ (ಸೆ.27) ಪತ್ರಿಕಾ ಸ್ವಾತಂತ್ರ್ಯದ ಹರಿಕಾರ, ಸತಿ ಸಹಗಮನ ಪದ್ಧತಿ ನಿರ್ಮೂಲನೆಗೆ ನಾಂದಿ ಹಾಡಿದ **ರಾಜಾರಾಮ ಮೋಹನ ರಾಯ್** ಪುಣ್ಯಸ್ಮರಣೆ ಸಮಾರಂಭ ಆಯೋಜಿಸಲಾಗಿದೆ. ಚಾಮರಾಜಪೇಟೆ ಕಸಾಪ ಕುವೆಂಪು ಸಭಾಂಗಣದಲ್ಲಿ ಸಾಯಂಕಾಲ 4ಕ್ಕೆ ಬಿಎಂಎಸ್ ಮಹಿಳಾ ಕಾಲೇಜಿನ ಕನ್ನಡ ಪ್ರಾಧ್ಯಾಪಕಿ ಡಾ. ಶೀಲಾ ಎಸ್. ಮಳೀಮಠ ಕಾರ್ಯಕ್ರಮ ಉದ್ಘಾಟಿಸಲಿದ್ದಾರೆ. ಶಿಕ್ಷಣತಜ್ಞ ಡಾ.ವ್ರೂಹೇ ಪಿ. ಕೃಷ್ಣ ಅಧ್ಯಕ್ಷತೆ ವಹಿಸಲಿದ್ದು, ಉದ್ಯಮಿ ಶೋಭಿನಿ ಗುರುದಾಸ್ ಮುಖ್ಯ ಅತಿಥಿಯಾಗಿ ಉಪಸ್ಥಿತರಿರುವರು. ರಾಣಿ ಗೋವಿಂದರಾಜು ಅಧ್ಯಕ್ಷತೆಯಲ್ಲಿ 'ರಾಜಾರಾಮ ಮೋಹನರಾಯ್‌ಗೆ ಕಾವ್ಯನಮನ' ಇರಲಿದೆ. ರತ್ನಾ ನಾಗರಾಜು, ಭಾಗ್ಯಲಕ್ಷ್ಮೀ ಮಗ್ಗೆ, ಡಾ.ಬಿ. ಇಂದಿರಾದೇವಿ, ವಿಶಾಲ ಆರಾಧ್ಯ, ನಳಿನಿ ಮಹಾದೇವಸ್ವಾಮಿ, ಎಸ್.ಟಿ. ಶಾಂತಕುಮಾರಿ, ಮಾಲತಿ ಆರಾಧ್ಯ, ವೀಣಾ ನಾಡಿಗೇರ, ಶೈಲಾ ದೇವರಾಜ್, ಅನುಸೂಯಾ ಹೆಸರಘಟ್ಟ ಕವಿತೆಗಳನ್ನು ವಾಚಿಸಲಿದ್ದಾರೆ. ಬಾಪುಗೌಡ ಪಾಟೀಲ, ಎಸ್.ಎಂ. ರಾಜಶೇಖರಯ್ಯ ಗಾಯನ ನಮನ ನಡೆಸಿಕೊಡಲಿದ್ದಾರೆ.

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ

ಮಂಗಳವಾರ 11 ಸೆಪ್ಟೆಂಬರ್ 2018
VIJAYAVANI » 11 SEPTEMBER 2018

# ಧರ್ಮ, ಜಾತಿಭೇದ ಮರೆಸಿ ಸ್ನೇಹ ಮೂಡಿಸಿದ ಬರ, ಪ್ರವಾಹಗಳು

## ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಡಾ. ಅರವಿಂದ ಮಾಲಗತ್ತಿ ಅಭಿಮತ | ಜೀವಜಲ ಕಾದಂಬರಿ ಲೋಕಾರ್ಪಣೆ

ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಮತೀಯ ಭಾವನೆ ಉಲ್ಬಣವಾಗುತ್ತಿರುವ ಕಾಲದಲ್ಲಿ ಕೊಡಗಿನ ಪ್ರವಾಹ ಎಲ್ಲರ ಧರ್ಮ, ಜಾತಿ ಭೇದವನ್ನು ಮರೆಸಿತು ಎಂದು ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಡಾ. ಅರವಿಂದ ಮಾಲಗತ್ತಿ ಹೇಳಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸೋಮವಾರ ಜಾಣಗೆರೆ ಪತ್ರಿಕೆ ಪ್ರಕಾಶನ ಹಮ್ಮಿಕೊಂಡ ಸಮಾರಂಭದಲ್ಲಿ ಪತ್ರಕರ್ತ ಹಾಗೂ ಸಾಹಿತಿ ಜಾಣಗೆರೆ ವೆಂಕಟರಾಮಯ್ಯ ಅವರ 'ಜೀವಜಲ' ಕಾದಂಬರಿಯನ್ನು ಬಿಡುಗಡೆ ಮಾಡಿದರು.

- ಜಾಣಗೆರೆ ವೆಂಕಟರಾಮಯ್ಯ ರಚಿತ ಕೃತಿ
- ಜಾಣಗೆರೆ ಪತ್ರಿಕೆ ಪ್ರಕಾಶನದಿಂದ ಪ್ರಕಟ

ಕೊಡಗಿನಲ್ಲಿ ಪ್ರವಾಹ ಉಂಟಾದ ಸಮಯದಲ್ಲಿ ಸಂತ್ರಸ್ತರು ಮಸೀದಿಯಲ್ಲಿ ನೆಲೆಸಿದ್ದರು. ಇಲ್ಲಿ ಹಿಂದು, ಮುಸ್ಲಿಂ ಹಾಗೂ ಕ್ರಿಶ್ಚಿಯನ್ನರು ಧರ್ಮಭೇದವನ್ನು ಮರೆತು, ಪರಸ್ಪರ ಪ್ರೀತಿ, ಸ್ನೇಹದಿಂದ ಸಂಕಷ್ಟದ ದಿನಗಳನ್ನು ಕಳೆದರು ಎಂದು ಹೇಳಿದರು.

**ಕಾದಂಬರಿಯಲ್ಲಿ ಕೆರೆ ರೂಪಕ:** ಜನತಂತ್ರದ ವ್ಯವಸ್ಥೆಯಲ್ಲಿ ಆಶಾಭಾವನೆ ಇದೆ ಎಂಬುದನ್ನು 'ಜೀವಜಲ' ಕಾದಂಬರಿ ಹೇಳುತ್ತದೆ. ರಾಜಕಾರಣದಲ್ಲಿ ಹಣ ಹೇಗೆ ಕೆಲಸ ಮಾಡುತ್ತದೋ ಅದೇ ರೀತಿ ಜನತಂತ್ರಕ್ಕೆ ಅದಕ್ಕಿಂತ ಹೆಚ್ಚು ಬಲ ಇದೆ ಎಂಬುದಕ್ಕೆ ಕೃತಿಯಲ್ಲಿ ಮಹತ್ವ ನೀಡಲಾಗಿದೆ. ಯಾವುದೇ ಒಂದು ಕಾದಂಬರಿ ಸೃಷ್ಟಿಸಲು ಲೇಖಕನಾದವನಿಗೆ ಸಾಕಷ್ಟು ಧಾರಣಾ ಸಾಮರ್ಥ್ಯ ಬೇಕು. ಅದನ್ನು ಜಾಣಗೆರೆ ಹೊಂದಿದ್ದಾರೆ. 'ಜೀವಜಲ'ದಲ್ಲಿ ಒಂದು ಕೆರೆ ರೂಪಕವಾಗಿ ನಿಲ್ಲುತ್ತದೆ. ಕಾದಂಬರಿಯ ಮೂಲ ಮತ್ತು ಅಂತ್ಯ ಕೆರೆಯಿಂದಲೇ ಆಗುತ್ತದೆ. ಎಲ್ಲ ಸನ್ನಿವೇಶಗಳು ನೈಜವಾಗಿ ಮಿಳಿತಗೊಂಡಿವೆ ಎಂದು ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಹಾಗೂ ವಿಜಯವಾಣಿ ಅಂಕಣಕಾರ ಮಲ್ಲೇಪುರಂ ಜಿ. ವೆಂಕಟೇಶ್ ಮೆಚ್ಚುಗೆ ವ್ಯಕ್ತಪಡಿಸಿದರು.

ಲೇಖಕ ಜಾಣಗೆರೆ ವೆಂಕಟರಾಮಯ್ಯ, ಕನ್ನಡ ಪುಸ್ತಕ ಪ್ರಾಧಿಕಾರದ ಮಾಜಿ ಅಧ್ಯಕ್ಷ ಡಾ. ಬಂಜಗೆರೆ ಜಯಪ್ರಕಾಶ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಕರ್ನಾಟಕ ಸಾಹಿತ್ಯ ಅಕಾಡೆಮಿ ಸದಸ್ಯ ಡಾ. ಬೈರಮಂಗಲ ರಾಮೇಗೌಡ, ಬೆಂಗಳೂರು ನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಮಾಯಣ್ಣ ಮತ್ತಿತರರು ಉಪಸ್ಥಿತರಿದ್ದರು.


ವಿಜಯವಾಣಿ

**ಕನ್ನಡ ಸೇವಾರತ್ನ ಪ್ರಶಸ್ತಿ ಪ್ರದಾನ**

ವಿವಿಧ ಕ್ಷೇತ್ರದ ಸಾಧಕರಿಗೆ ಕನ್ನಡ ಸೇವಾರತ್ನ ಪ್ರಶಸ್ತಿಯನ್ನು ಪ್ರದಾನ ಮಾಡಲಾಯಿತು. ರಂಗಭೂಮಿ ಕ್ಷೇತ್ರದಲ್ಲಿ ಮೈಸೂರು ರಮಾನಂದ ಹಾಗೂ ಪುಷ್ಪಲತಾ ರಮಾನಂದ, ವರ್ಣಚಿತ್ರ ಕಲೆಯಲ್ಲಿ ಬಿ.ಪಿ. ಕಾರ್ತಿಕ್, ವೈದ್ಯಕೀಯ ಕ್ಷೇತ್ರದಲ್ಲಿ ಡಾ.ಬಿ.ಎನ್. ವಾಸುದೇವ ಮೂರ್ತಿ, ಸಮಾಜಸೇವೆಗೆ ನಾ. ಮಲ್ಲಿಕಾರ್ಜುನ, ನುಡಿಚಿತ್ರ ಸಂಗ್ರಹಕ್ಕೆ ಮುಂ.ಅ. ವೆಂಕಟೇಶ, ಕನ್ನಡ ಸೇವೆಗೆ ಎಸ್. ಶಿವರಾಮ್ ಹಾಗೂ ಬಿ. ಸುಭಾಷ್ ಮತ್ತು ಚಿತ್ರರಂಗದಲ್ಲಿ ಸಾಧನೆ ಮಾಡಿದ ಟೋನಿ ಅವರಿಗೆ ಪ್ರಶಸ್ತಿ ವಿತರಣೆ ಮಾಡಲಾಯಿತು.

> ಪ್ರಸ್ತುತ ಸನ್ನಿವೇಶದಲ್ಲಿ ಮಹಾಕಾವ್ಯ, ಮಹಾ ಕಾದಂಬರಿ ಅಗತ್ಯವೇ ಎಂಬ ಪ್ರಶ್ನೆ ಉದ್ಭವಿಸಿದೆ. ಅಷ್ಟೇ ಅಲ್ಲ, ನಮ್ಮಲ್ಲಿ ಮಹಾ ಕಾವ್ಯವನ್ನು ರಚಿಸುವ ಹಾಗೂ ಓದುವ ವ್ಯವಧಾನ ಸಹ ಕಡಿಮೆ ಆಗುತ್ತಿದೆ. ಆದರೆ, ಎಲ್ಲಿಯವರೆಗೆ ಮಹಾ ಬದುಕನ್ನು ನಡೆಸುತ್ತೇವೆಯೋ ಅಲ್ಲಿಯವರೆಗೆ ಮಹಾ ಕಾವ್ಯವೂ ಹುಟ್ಟಿ ಬರುತ್ತದೆ.
>
> | ಡಾ. ಅರವಿಂದ ಮಾಲಗತ್ತಿ
> ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷ

ಕಸಾಪದಲ್ಲಿ ಹಮ್ಮಿಕೊಂಡಿದ್ದ ಸಮಾರಂಭದಲ್ಲಿ ಕನ್ನಡ ಸೇವಾರತ್ನ ಪ್ರಶಸ್ತಿಯನ್ನು ಪ್ರದಾನ ಮಾಡಲಾಯಿತು. ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಡಾ. ಅರವಿಂದ ಮಾಲಗತ್ತಿ, ವಿಜಯವಾಣಿ ಅಂಕಣಕಾರ ಮಲ್ಲೇಪುರಂ ಜಿ. ವೆಂಕಟೇಶ್ ಇತರರಿದ್ದರು.

ಉದಯವಾಣಿ

ಮಂಗಳವಾರ, ಸೆಪ್ಟೆಂಬರ್ 11, 2018

# ಮತೀಯ ಭಾವನೆ ತೊಳೆದ ಪ್ರವಾಹ

## ಕೊಡಗು ನೆರೆ ವೇಳೆ ಸಂತ್ರಸ್ತರು ಧರ್ಮ ಭೇದ ಮರೆತಿದ್ದರು: ಮಾಲಗತ್ತಿ



ಜಾಣಗೆರೆ ಪತ್ರಿಕೆ ಪ್ರಕಾಶನ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಜಾಣಗೆರೆ ವೆಂಕಟರಾಮಯ್ಯ ಅವರ 'ಜೀವಜಲ' ಕಾದಂಬರಿ ಬಿಡುಗಡೆ ಮಾಡಲಾಯಿತು.

ಬೆಂಗಳೂರು: ನಮ್ಮಲ್ಲಿನ ಅಹಂ, ಸಿರಿವಂತಿಕೆಯ ಶಿಖರ ಹಾಗೂ ಮತೀಯ ಭಿನ್ನಭಾವವನ್ನು ಕೆಡವಲು ಪ್ರವಾಹ ಹಾಗೂ ಬರಗಾಲಕ್ಕೆ ಮಾತ್ರ ಸಾಧ್ಯ ಎಂದು ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಡಾ. ಅರವಿಂದ ಮಾಲಗತ್ತಿ ಅಭಿಪ್ರಾಯಪಟ್ಟರು.

ಜಾಣಗೆರೆ ಪತ್ರಿಕೆ ಪ್ರಕಾಶನ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸೋಮವಾರ ಹಮ್ಮಿಕೊಂಡಿದ್ದ ಸಾಹಿತಿ ಜಾಣಗೆರೆ ವೆಂಕಟರಾಮಯ್ಯ ಅವರ 'ಜೀವಜಲ' ಕಾದಂಬರಿ ಬಿಡುಗಡೆ ಸಮಾರಂಭದಲ್ಲಿ ಮಾತನಾಡಿದ ಅವರು, ಕೊಡಗಿನಲ್ಲಿ ಪ್ರವಾಹ ಉಂಟಾದ ಸಮಯದಲ್ಲಿ ಸಂತ್ರಸ್ತರು ಮಸೀದಿಯಲ್ಲಿ ನೆಲೆಸಿದ್ದರು. ಇಲ್ಲಿ ಹಿಂದು, ಮುಸ್ಲಿಂ ಹಾಗೂ ಕ್ರಿಶ್ಚಿಯನ್ನರು ಧರ್ಮ ಭೇದವನ್ನು ಮರೆತು, ಪರಸ್ಪರ ಪ್ರೀತಿ, ಸ್ನೇಹದಿಂದ ಸಂಕಷ್ಟದ ದಿನಗಳನ್ನು ಎದುರಿಸಿದರು. ಅನೇಕರು ಅಹಂ ಹಾಗೂ ಬಡವ ಎಂಬ ಭೇದವಿಲ್ಲದೇ ಜತೆಗಿದ್ದರು ಎಂದರು.

ಇದೇ ವೇಳೆ ಸಾಧಕರಿಗೆ ಕನ್ನಡ ಸೇವಾರತ್ನ ಪ್ರಶಸ್ತಿ ಪ್ರದಾನ ಮಾಡಲಾಯಿತು. ರಂಗಭೂಮಿ ಕ್ಷೇತ್ರದಲ್ಲಿ ಮೈಸೂರು ರಮಾನಂದ ಹಾಗೂ ಪುಷ್ಪಲತಾ ರಮಾನಂದ, ವರ್ಣಚಿತ್ರ ಕಲೆಯಲ್ಲಿ ಬಿ.ಪಿ. ಕಾರ್ತಿಕ್, ವೈದ್ಯಕೀಯ ಕ್ಷೇತ್ರದಲ್ಲಿ ಡಾ. ಬಿ.ಎನ್. ವಾಸುದೇವ ಮೂರ್ತಿ, ಸಮಾಜಸೇವೆಗೆ ನಾ. ಮಲ್ಲಿಕಾರ್ಜುನ, ನುಡಿಚಿತ್ರ ಸಂಗ್ರಹಕ್ಕೆ ಮುಂ.ಅ. ವೆಂಕಟೇಶ, ಕನ್ನಡ ಸೇವೆಗೆ ಎಸ್. ಶಿವರಾಮ್ ಹಾಗೂ ಜಿ. ಸುಭಾಷ್ ಮತ್ತು ಚಿತ್ರರಂಗದಲ್ಲಿ ಸಾಧನೆ ಮಾಡಿದ ಟೋನಿ ಅವರಿಗೆ ಪ್ರಶಸ್ತಿ ವಿತರಣೆ ಮಾಡಲಾಯಿತು.

ಈ ಸಂಜೆ

ಮಂಗಳವಾರ 11-09-2018



ಕನ್ನಡ ಸಾಹಿತ್ಯ ಪರಿಷತ್‌ನಲ್ಲಿ ನಡೆದ ಸಮಾರಂಭದಲ್ಲಿ ಸಾಹಿತಿ, ಪತ್ರಕರ್ತ ಜಾಣಗೆರೆ ವೆಂಕಟರಾಮಯ್ಯ ಅವರ "ಜೀವಜಲ" ಕಾದಂಬರಿಯನ್ನು ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಡಾ. ಅರವಿಂದ ಮಾಲಗತ್ತಿ ಬಿಡುಗಡೆ ಮಾಡಿದರು. ಡಾ. ಬಂಜಗೆರೆ ಜಯಪ್ರಕಾಶ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೆ ಪಿ. ಕೃಷ್ಣ, ಡಾ. ಬೈರಮಂಗಲ ರಾಮೇಗೌಡ, ಬೆಂಗಳೂರು ನಗರ ಜಿಲ್ಲಾ ಕಸಾಪ ಅಧ್ಯಕ್ಷ ಮಾಯಣ್ಣ, ಅಂಕಣಕಾರ ಮಲ್ಲೇಪುರಂ ಜಿ. ವೆಂಕಟೇಶ್ ಮತ್ತಿತರರು ಪಾಲ್ಗೊಂಡಿದ್ದರು.

# ಕನ್ನಡಪ್ರಭ

ಮಂಗಳವಾರ 11.9.2018



ನಗರದ ಕನ್ನಡ ಸಾಹಿತ್ಯ ಪರಿಷತ್ ಸಭಾಂಗಣದಲ್ಲಿ ಸೋಮವಾರ ಜಾಣಗೆರೆ ಪತ್ರಿಕೆ ಪ್ರಕಾಶನ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಸಾಹಿತಿ ಜಾಣಗೆರೆ ವೆಂಕಟರಾಮಯ್ಯ ಅವರ ಬೃಹತ್ ಕಾದಂಬರಿ 'ಜೀವಜಲ' ಬಿಡುಗಡೆ ಮಾಡಲಾಯಿತು.

ವಿಶ್ವವಾಣಿ

ಬೆಂಗಳೂರು
vishwavani.news
06.09.2018 ಗುರುವಾರ

# ಕೃಷಿ ಪೂರಕ ಆವಿಷ್ಕಾರಗಳಿಗೆ ಒತ್ತು

**ಬೆಂಗಳೂರು:** ಉದ್ಯಮಿಗಳು ಮತ್ತು ತಂತ್ರಜ್ಞರು ಸರಕಾರ ಯೋಜನೆಗಳನ್ನು ಸದುಪಯೋಗ ಮಾಡಿಕೊಂಡು. ಕೃಷಿಗೆ ಉತ್ತೇಜನ ನೀಡುವಂತಹ ಹೊಸ ಆವಿಷ್ಕಾರಗಳು ಮತ್ತು ತಂತ್ರಜ್ಞಾನವನ್ನು ಅಭಿವೃದ್ಧಿಪಡಿಸಲು ಒತ್ತು ನೀಡಬೇಕು ಎಂದು ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ಹೇಳಿದರು.

ನಗರದಲ್ಲಿರುವ ನಿಮ್ಹಾನ್ಸ್ ಕನ್ವೆನ್ಷನ್ ಸೆಂಟರ್‌ನಲ್ಲಿ ಹಮ್ಮಿಕೊಂಡಿದ್ದ 'ಭಾರತೀಯ ತಂತ್ರಜ್ಞಾನ ಸಮಾವೇಶದಲ್ಲಿ ಮಾತನಾಡಿ, ಕೃಷಿ ಕ್ಷೇತ್ರ ಸಂಕಷ್ಟಕ್ಕೆ ಸಿಲುಕಿರುವದರಿಂದ ರೈತರು ಕಂಗಾಲಾಗಿದ್ದಾರೆ. ರೈತರ ಆದಾಯ ಹೆಚ್ಚಿಸುವಂತಹ ತಂತ್ರಜ್ಞಾನಗಳ ಅಭಿವೃದ್ಧಿಗೆ ಪ್ರಾಧಾನ್ಯತೆ ನೀಡಬೇಕು.. ಈ ತಂತ್ರಜ್ಞಾನಗಳನ್ನು ಸರಕಾರದ ಗಮನಕ್ಕೆ ತಂದರೆ ಜಾರಿಗೆ ತರಲಾಗುವುದು. ದೇಶದಲ್ಲೇ ಅತ್ಯುತ್ತಮ ಎಂಜಿನಿಯರಿಂಗ್ ಕಾಲೇಜುಗಳು ರಾಜ್ಯದಲ್ಲಿವೆ. ಹಾಗಾಗಿ ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಕರ್ನಾಟಕ ಮುಂಚೂಣಿಯಲ್ಲಿರುವ ಈ ಎಲ್ಲ ಅಂಶಗಳು ಕಾರಣವಾಗಿವೆ ಎಂದರು.

ರೋಬೋಟಿಕ್ ತಂತ್ರಜ್ಞಾನ, ನ್ಯಾನೋ ತಂತ್ರಜ್ಞಾನ ಸೇರಿದಂತೆ ಇತರೆ ತಾಂತ್ರಿಕ ಅನ್ವೇಷಣೆಗಳಿಗೆ ಸರಕಾರ ಹೆಚ್ಚು ಒತ್ತು ನೀಡಿದೆ. ಈ ಮೂಲಕ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನದ ಅಭಿವೃದ್ಧಿಯಲ್ಲಿ ಬೆಂಗಳೂರು ಈಗಾಗಲೇ ವಿಶ್ವದ ಗಮನ ಸೆಳೆದಿದೆ ಎಂದು ತಿಳಿಸಿದರು.

ಕಾರ್ಯಕ್ರಮದಲ್ಲಿ ಹಿರಿಯ ವಿಜ್ಞಾನಿಗಳಾ ಪದ್ಮಶ್ರೀ ಎಚ್.ಸಿ.ವಿಶ್ವೇಶ್ವರಯ್ಯ ಹಾಗೂ ನಿವೃತ್ತ ಲೆಫ್ಟಿನೆಂಟ್ ಜನರಲ್ ವಿ.ಜೆ.ಸುಂದರರಾಮ್ ಅವರಿಗೆ ಜೀವಮಾನ ಸಾಧನೆ ಪ್ರಶಸ್ತಿ ನೀಡಿ ಗೌರವಿಸಲಾಯಿತು.

> **6** ರೈತರ ಅನುಕೂಲಕ್ಕಾಗಿ ವೈಜ್ಞಾನಿಕ ಕೃಷಿ ಪದ್ಧತಿ ಜಾರಿಗೆ ಸಂಬಂಧಿಸಿದಂತೆ ಅಗ್ರೋ ಇನ್ನೋವೇಟಿವ್ ಸೆಂಟರ್ ಪ್ರಾರಂಭ ಮಾಡಿದೆ. ಆದ್ದರಿಂದ ಉದ್ಯಮಿಗಳು ಮತ್ತು ತಂತ್ರಜ್ಞರು ಸರಕಾರ ಯೋಜನೆಗಳನ್ನು ಸದ್ಬಳಕೆ ಮಾಡಿಕೊಳ್ಳಬೇಕು.
> **-ಎಚ್.ಡಿ.ಕುಮಾರಸ್ವಾಮಿ, ಮುಖ್ಯಮಂತ್ರಿ**



ನಗರದಲ್ಲಿ ಹಮ್ಮಿಕೊಂಡಿದ್ದ 'ಭಾರತೀಯ ತಂತ್ರಜ್ಞಾನ ಸಮಾವೇಶದಲ್ಲಿ ಹಿರಿಯ ವಿಜ್ಞಾನಿ ಪದ್ಮಶ್ರೀ ಎಚ್.ಸಿ. ವಿಶ್ವೇಶ್ವರಯ್ಯ ಅವರಿಗೆ ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ಅವರು ಜೀವಮಾನ ಸಾಧನೆ ಪ್ರಶಸ್ತಿ ನೀಡಿ ಗೌರವಿಸಿದರು. ಭಾರತೀಯ ತಂತ್ರಜ್ಞಾನ ಸಮಾವೇಶದ ಅಧ್ಯಕ್ಷ ಡಾ. ಎಲ್.ವಿ.ಮುರಳಿಕೃಷ್ಣ ರೆಡ್ಡಿ, ಇಂಡಿಯನ್ ಇನ್‌ಸ್ಟಿಟ್ಯೂಷನ್ ಆಫ್ ಪ್ರೊಡಕ್ಷನ್ ಎಂಜಿನಿಯರ್ಸ್ ಸಂಸ್ಥೆಯ ರಾಷ್ಟ್ರೀಯ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ ಇದ್ದರು.

ವಿಜಯ ಕರ್ನಾಟಕ ಗುರುವಾರ, 6 ಸೆಪ್ಟೆಂಬರ್ 2018

## ಭಾರತೀಯ ತಂತ್ರಜ್ಞಾನ ಸಮಾವೇಶದಲ್ಲಿ ಸಿಎಂ ಸಲಹೆ

# ಕೃಷಿ ತಂತ್ರಜ್ಞಾನ ಅಭಿವೃದ್ಧಿಗೆ ಗಮನಹರಿಸಿ

■ ವಿಕ ಸುದ್ದಿಲೋಕ ಬೆಂಗಳೂರು

ಉದ್ಯಮಿಗಳು ಮತ್ತು ತಂತ್ರಜ್ಞರು ಸರಕಾರದ ಯೋಜನೆಗಳನ್ನು ಸದುಪಯೋಗಪಡಿಸಿಕೊಂಡು ಕೃಷಿಗೆ ಉತ್ತೇಜನೆ ನೀಡುವಂತಹ ಹೊಸ ಆವಿಷ್ಕಾರಗಳನ್ನು ಕೈಗೊಳ್ಳುವ ಜತೆಗೆ ತಂತ್ರಜ್ಞಾನವನ್ನು ಅಭಿವೃದ್ಧಿಪಡಿಸಬೇಕು ಎಂದು ಎಚ್.ಡಿ.ಕುಮಾರಸ್ವಾಮಿ ಹೇಳಿದರು.

**ವಿಜ್ಞಾನಿಗಳಿಗೆ ಪ್ರಶಸ್ತಿ ಪ್ರದಾನ**

ನಗರದ ನಿಮ್ಹಾನ್ಸ್ ಕನ್ವೆನ್ಷನ್ ಸೆಂಟರ್‌ನಲ್ಲಿ ಬುಧವಾರ 'ಭಾರತೀಯ ತಂತ್ರಜ್ಞಾನ ಸಮಾವೇಶ'ಕ್ಕೆ ಚಾಲನೆ ನೀಡಿ ಮಾತನಾಡಿದ ಅವರು, ''ನಾನಾ ಕಾರಣಗಳಿಂದಾಗಿ ರಾಜ್ಯದಲ್ಲಿ ಕೃಷಿ ಕ್ಷೇತ್ರ ಸಂಕಷ್ಟದಲ್ಲಿದ್ದು, ರೈತರು ಸಮಸ್ಯೆಗೆ ಸಿಲುಕಿದ್ದಾರೆ. ಈ ಕ್ಷೇತ್ರದ ಅಭಿವೃದ್ಧಿಗೆ ವಿಜ್ಞಾನಿಗಳು, ತಂತ್ರಜ್ಞರು ಹಾಗೂ ಉದ್ಯಮಿಗಳು ನೀಡುವ ಸಲಹೆಗಳನ್ನು ಸಕಾರಾತ್ಮಕವಾಗಿ ಪರಿಗಣಿಸಲಾಗುವುದು. ತಂತ್ರಜ್ಞಾನಗಳ ಬಗ್ಗೆ ಸರಕಾರದ ಗಮನಕ್ಕೆ ತಂದರೆ ಅನುಷ್ಠಾನಕ್ಕೆ ಕ್ರಮ ಕೈಗೊಳ್ಳಲಾಗುವುದು''ಎಂದರು.

''ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನದ ಅಭಿವೃದ್ಧಿಯಲ್ಲಿ ಬೆಂಗಳೂರು ಈಗಾಗಲೇ ವಿಶ್ವದ ಗಮನ ಸೆಳೆದಿದೆ. ಇದೇ ಮಾದರಿಯಲ್ಲಿ ಕೃತಕ ಬುದ್ಧಿಮತ್ತೆ, ರೋಬೋಟಿಕ್ ತಂತ್ರಜ್ಞಾನ, ನ್ಯಾನೋ ತಂತ್ರಜ್ಞಾನ ಸೇರಿದಂತೆ ಇತರೆ ತಾಂತ್ರಿಕ ಅನ್ವೇಷಣೆಗಳಿಗೆ ಸರಕಾರ ಹೆಚ್ಚು ಒತ್ತು ನೀಡಿದೆ. ರಾಜ್ಯದಲ್ಲಿ ನುರಿತ ಮತ್ತು ಉತ್ತಮ ಕೌಶಲವನ್ನು ಹೊಂದಿರುವ ವೃತ್ತಿಪರರು ನಮ್ಮಲ್ಲಿದ್ದಾರೆ. ಜತೆಗೆ ದೇಶದಲ್ಲೇ ಅತ್ಯುತ್ತಮ ಎಂಜಿನಿಯರಿಂಗ್ ಕಾಲೇಜುಗಳು ರಾಜ್ಯದಲ್ಲಿವೆ. ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಕರ್ನಾಟಕ ಮುಂಚೂಣಿಯಲ್ಲಿರುವುದಕ್ಕೆ ಈ ಎಲ್ಲಾ ಅಂಶಗಳು ಕಾರಣವಾಗಿವೆ. ಹಾಗಾಗಿ, ಈ ಸಮಾವೇಶ ನಮ್ಮ ಸಮಾಜ ಎದುರಿಸುತ್ತಿರುವ ನಾನಾ ಸಮಸ್ಯೆಗಳಿಗೆ ಪರಿಹಾರ ಸೂಚಿಸುವಂತಾಗಲಿ'' ಎಂದು ಕುಮಾರಸ್ವಾಮಿ ಹಾರೈಸಿದರು.

ಕಾರ್ಯಕ್ರಮದಲ್ಲಿ ಹಿರಿಯ ವಿಜ್ಞಾನಿಗಳಾದ ಪದ್ಮಶ್ರೀ ಎಚ್.ಸಿ.ವಿಶ್ವೇಶ್ವರಯ್ಯ ಹಾಗೂ ನಿವೃತ್ತ ಲೆ.ಜ. ವಿ.ಜೆ.ಸುಂದರರಾಮ್ ಅವರಿಗೆ ಜೀವಮಾನ ಸಾಧನೆ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಇದೇ ವೇಳೆ ಹಮ್ಮಿಕೊಂಡಿದ್ದ ವಸ್ತು ಪ್ರದರ್ಶನದಲ್ಲಿ ಡಿಆರ್‌ಡಿಒ ಸಂಸ್ಥೆ ಕಾವೇರಿ ಎಂಜಿನ್, ಟರ್ಬೋ ಚಾರ್ಜರ್, ಕಾವೇರಿ ಎಂಜಿನ್ ಬ್ಲೇಡ್ಸ್, ಲಕ್ಷ್ಯ್ ಮತ್ತು ರುಸ್ತುಂ ಪೈಲೆಟ್ ರಹಿತ ಯುದ್ಧ ವಿಮಾನಗಳ ಮಾದರಿಗಳನ್ನು ಪ್ರದರ್ಶಿಸಿತು.

ಜತೆಗೆ ಕರ್ನಾಟಕ ರಾಜ್ಯ ತೆಂಗು ಅಭಿವೃದ್ಧಿ ಮಂಡಳಿಯು ನಾನಾ ತೆಂಗಿನ ಉತ್ಪನ್ನಗಳು ಹಾಗೂ ನಾನಾ ಜಾತಿಯ ತೆಂಗಿನ ಕಾಯಿಗಳು ಮತ್ತು ಬಾಗಲಕೋಟದ ತೋಟಗಾರಿಕೆ ವಿಶ್ವವಿದ್ಯಾಲಯವು ಹಲಸು, ಟೊಮೆಟೋ, ಬಾಳೆ, ಸಪೋಟ ಇತ್ಯಾದಿ ಒಣಹಣ್ಣುಗಳನ್ನು ಪ್ರದರ್ಶಿಸಿತು. ಬಿಇಎಲ್ ಸಂಸ್ಥೆಯು ಇವಿಎಂ ಯಂತ್ರಗಳ ಪ್ರದರ್ಶನ ಮಾಡಿತ್ತು. ಎರಡು ದಿನಗಳ ಕಾಲ ನಡೆಯಲಿರುವ ಈ ಸಮಾವೇಶದಲ್ಲಿ ಕೃಷಿ, ಬಾಹ್ಯಾಕಾಶ, ಉಪಗ್ರಹ ಸೇರಿದಂತೆ ನಾನಾ ವಿಷಯಗಳ ಕುರಿತು ವಿಚಾರ ಸಂಕಿರಣಗಳು ನಡೆಯಲಿವೆ.

ಭಾರತೀಯ ತಂತ್ರಜ್ಞಾನ ಸಮಾವೇಶದ ಅಧ್ಯಕ್ಷ ಡಾ.ಎಲ್.ವಿ.ಮುರಳಿಕೃಷ್ಣ ರೆಡ್ಡಿ, ಇಂಡಿಯನ್ ಇನ್‌ಸ್ಟಿಟ್ಯೂಷನ್ ಆಫ್ ಪ್ರೊಡಕ್ಷನ್ ಎಂಜಿನಿಯರ್ಸ್ ಸಂಸ್ಥೆಯ ರಾಷ್ಟ್ರೀಯ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ, ಭಾರತೀಯ ವಿಶ್ವವಿದ್ಯಾಲಯಗಳ ಒಕ್ಕೂಟದ ಅಧ್ಯಕ್ಷ ಡಾ.ಸಂದೀಪ್ ಸಂಚೇತಿ, ಪ್ರೊ.ಆರ್.ಎಂ.ವಾಸಗಮ್, ತ್ಯಾಗರಾಜನ್ ಸೇರಿದಂತೆ ಹಲವರು ಉಪಸ್ಥಿತರಿದ್ದರು.



ನಿಮ್ಹಾನ್ಸ್ ಕನ್ವೆನ್ಷನ್ ಸೆಂಟರ್‌ನಲ್ಲಿ ಆಯೋಜಿಸಿದ್ದ ಭಾರತೀಯ ತಂತ್ರಜ್ಞಾನ ಸಮಾವೇಶದಲ್ಲಿ ವಿದ್ಯಾರ್ಥಿಗಳು ವಿಮಾನದ ಮಾದರಿ ಪ್ರದರ್ಶಿಸಿದರು.

ವಿಶ್ವವಾಣಿ

ಬೆಂಗಳೂರು
vishwavani.news
05.09.2018 ಬುಧವಾರ

## ಯುವಕರಿಗೆ ಮಹಾದೇವಪ್ಪರ ತ್ಯಾಗ, ಬಲಿದಾನ ಮಾದರಿ: ಕೇಂದ್ರ ಸಚಿವ ಮನೋಜ್ ಸಿನ್ಹಾ ಹೇಳಿಕೆ

# ಮೈಲಾರ ಮಹದೇವಪ್ಪ ಅಂಚೆ ಚೀಟಿ ಲೋಕಾರ್ಪಣೆ

**ವಿಶ್ವವಾಣಿ ಸುದ್ದಿಮನೆ** ಬೆಂಗಳೂರು

ಮಹಾತ್ಮ ಗಾಂಧೀಜಿ ಕೈಗೊಂಡಿದ್ದ ದಂಡಿಯಾತ್ರೆಯಲ್ಲಿ ಪಾಲ್ಗೊಂಡಿದ್ದ 72 ಹೋರಾಟಗಾರರಲ್ಲಿ ರಾಜ್ಯದಿಂದ ಆಯ್ಕೆಯಾದ ಏಕೈಕ ಸ್ವಾತಂತ್ರ್ಯ ಹೋರಾಟಗಾರ ಮೈಲಾರ ಮಹದೇವಪ್ಪ ಅವರು. ದೇಶಕ್ಕಾಗಿ ಅವರ ಕೊಡುಗೆ ಅಪಾರ ಎಂದು ಕೇಂದ್ರ ಸಂವಹನ ಸಚಿವ ಮನೋಜ್ ಸಿನ್ಹಾ ಹೇಳಿದರು.

ನಗರದ ಗಾಂಧಿ ಭವನದಲ್ಲಿ ಕೇಂದ್ರದ ಸಂವಹನ ಅಂಚೆ ಇಲಾಖೆ ಹಾಗೂ ಹಾವೇರಿಯ ಮೈಲಾರ ಮಹದೇವಪ್ಪ ರಾಷ್ಟ್ರೀಯ ಸ್ಮಾರಕ ಟ್ರಸ್ಟ್ ವತಿಯಿಂದ ನಡೆದ ಹುತಾತ್ಮ ಮೈಲಾರ ಮಹಾದೇವಪ್ಪ ಸ್ಮರಣಾರ್ಥ 'ಅಂಚೆ ಚೀಟಿ' ಲೋಕಾರ್ಪಣೆ ಮಾಡಿ ಮಾತನಾಡಿದರು.

ದೇಶದ ಬಗ್ಗೆ ಅಪ್ರತಿಮ ಭಕ್ತಿ ಹೊಂದಿದ್ದ ಮೈಲಾರ ಮಹಾದೇವಪ್ಪ ಅವರ ತ್ಯಾಗ, ಬಲಿದಾನ ಎಲ್ಲರಿಗೂ ಮಾದರಿಯಾಗಿದೆ. ಗಾಂಧೀಜಿ ಅವರ ಜತೆ ಅಹಿಂಸಾತ್ಮಕವಾಗಿ ಹೋರಾಡಿ ದೇಶಕ್ಕೆ ಸ್ವಾತಂತ್ರ್ಯ ತಂದುಕೊಡುವಲ್ಲಿ ಮಹದೇವಪ್ಪ ಅವರ ಪಾತ್ರ ಮಹತ್ವದ್ದು. ಬ್ರಿಟಿಷರ ಗುಂಡೇಟಿಗೆ ಎದೆಯೊಡ್ಡಿ ಅನೇಕರು ಹುತಾತ್ಮರಾಗಿದ್ದಾರೆ. ಆದರೆ, ಗಾಂಧೀಜಿ ಹೊರತುಪಡಿಸಿದರೆ ಮಹಾದೇವಪ್ಪ ಅವರ ಕುಟುಂಬ ಮಾತ್ರ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿತ್ತು ಎಂದು ತಿಳಿಸಿದರು.

ಮಾಜಿ ಮುಖ್ಯಮಂತ್ರಿ ಜಗದೀಶ್ ಶೆಟ್ಟರ್ ಮಾತನಾಡಿ, ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭೂಗತರಾಗಿ ಏಳಕ್ಕೂ ಹೆಚ್ಚು ತಿಂಗಳು ಅವರು ಮಾಡಿದ ಸಾಹಸ, ಪಟ್ಟ ಕಷ್ಟ, ತೋರಿದ ಧೈರ್ಯ ಅಸಾಧಾರಣ. ಗಾಂಧಿಯಿಂದ ಪ್ರೇರಿತರಾದ ಅವರು ದೇಶಕ್ಕಾಗಿ ಮಹಾರಾಷ್ಟ್ರದಲ್ಲಿ ಬ್ರಿಟಿಷ್ ಪೊಲೀಸರ ಗುಂಡೇಟಿಗೆ ತಮ್ಮ ಪ್ರಾಣ ತ್ಯಾಗ ಮಾಡಿದರು. ಇಂತಹ ಹುತಾತ್ಮರ ನೆನಪು ಚಿರಸ್ಥಾಯಿಯಾಗಲು ಕೇಂದ್ರಕ್ಕೆ ಮನವಿ ಮಾಡಲಾಗಿತ್ತು. ಅದರಂತೆ ಮನವಿಗೆ ಸ್ಪಂದಿಸಿದ ಸಚಿವರು ಅಂಚೆ ಚೀಟಿ ಬಿಡುಗಡೆ ಮಾಡಿರುವುದು ಸಂತಸ ತಂದಿದೆ ಎಂದು ಕೇಂದ್ರ ಸರಕಾರಕ್ಕೆ ಅಭಿನಂದನೆ ತಿಳಿಸಿದರು.

ಸಂಸದ ಶಿವಕುಮಾರ್ ಸಿ.ಉದಾಸಿ ಮಾತನಾಡಿ, 1916ರಲ್ಲಿ ರಾಷ್ಟ್ರವ್ಯಾಪಿ ಕಾರ್ಯಕ್ರಮ ಹಮ್ಮಿಕೊಂಡು ಸ್ವಾತಂತ್ರ್ಯಕ್ಕಾಗಿ ಹೋರಾಡಿದವರು ಮೈಲಾರ ಮಹದೇವಪ್ಪ ಅವರು. ಸ್ವಾತಂತ್ರ್ಯ ಬಂದು 72 ವರ್ಷ ಕಳೆದಿದ್ದು, ಅನೇಕ ಚರ್ಚೆಗಳು ನಡೆಯುತ್ತಿವೆ. ಅಂದಿನ ಹೋರಾಟಗಳ ಹಿನ್ನೆಲೆಯಲ್ಲಿ ಮಹದೇವಪ್ಪ ಅವರ ಸ್ಮರಣಾರ್ಥ ಅಂಚೆ ಚೀಟಿ ಹೊರತಂದಿರುವುದು ಸಂತಸ ತಂದಿದೆ. ನಮಗೆ ಇಂತಹ ಹುತಾತ್ಮರು ಸದಾ ಸ್ಫೂರ್ತಿದಾಯಕವಾಗಿರಬೇಕು ಎಂದರು.



ಹುತಾತ್ಮ ಮೈಲಾರ ಮಹಾದೇವಪ್ಪ ಸ್ಮರಣಾರ್ಥ 'ಅಂಚೆ ಚೀಟಿ'ಯನ್ನು ಕೇಂದ್ರ ಸಂವಹನ ಸಚಿವ ಮನೋಜ್ ಸಿನ್ಹಾ ಲೋಕಾರ್ಪಣೆಗೊಳಿಸಿದರು. ಜಗದೀಶ ಶೆಟ್ಟರ್, ಜನರಲ್ ಡಾ. ಚಾರ್ಲ್ಸ್ ಲೋಬೋ, ಡಾ. ವೂಡೇ ಪಿ.ಕೃಷ್ಣ, ಕಸ್ತೂರಿ ದೇವಿ ಸಿದ್ದಲಿಂಗಯ್ಯ ಇತರರು ಇದ್ದರು.

### ದಂಡಿ ಯಾತ್ರೆಯಲ್ಲಿ ಭಾಗಿ

ಗಾಂಧೀಜಿ ಅವರ ಜತೆ ದಂಡಿ ಯಾತ್ರೆಯಲ್ಲಿ ಭಾಗಿಯಾಗುವ ಮೂಲಕ ಮಹದೇವಪ್ಪ ಅವರು ಹಾವೇರಿ ವಿಭಾಗದ ಯುವಕರನ್ನು ಎಚ್ಚೆತ್ತುಕೊಳ್ಳುವಂತೆ ಮಾಡಿ ಸಂಘ ಕಟ್ಟಿ, ಬ್ರಿಟಿಷರ ವಿರುದ್ಧ ಹೋರಾಡಿದ್ದರು. ಅಲ್ಲದೆ, ಅಸಹಕಾರ ಚಳವಳಿಯಲ್ಲೂ ಅವರ ಕೊಡುಗೆ ಅಪಾರ. ಇಂತಹ ಸ್ವಾತಂತ್ರ್ಯ ಚಳವಳಿಯಲ್ಲಿ ಕರ್ನಾಟಕದಿಂದ ಗಾಂಧಿ ಯುಗದಲ್ಲಿ ಬಲಿದಾನ ಮಾಡಿದ ವೀರಯೋಧರಲ್ಲಿ ಮಹದೇವಪ್ಪ ಅಗ್ರಗಣ್ಯರು ಎಂದು ಮಾಜಿ ಮುಖ್ಯಮಂತ್ರಿ ಜಗದೀಶ್ ಶೆಟ್ಟರ್ ತಿಳಿಸಿದರು.

### ಶರೀಫ್‌ರ ಅಂಚೆ ಚೀಟಿ ಹೊರತನ್ನಿ

ಮೈಲಾರ ಮಹದೇವಪ್ಪ ಅವರ ಸ್ಮರಣಾರ್ಥ ಅಂಚೆ ಚೀಟಿ ಬಿಡುಗಡೆಗೊಳಿಸಿದಂತೆ ಕರ್ನಾಟಕದ ಕಬೀರ ಎಂದೇ ಖ್ಯಾತಿ ಪಡೆದ ಸಂತ ಶಿಶುನಾಳ ಶರೀಫ್ ಅವರ ಅಂಚೆ ಚೀಟಿ ಹೊರ ತರುವಂತೆ ಜಗದೀಶ್ ಶೆಟ್ಟರ್ ಹಾಗೂ ಡಾ. ಚಾರ್ಲ್ಸ್ ಲೋಬೋ ಅವರು ಕೇಂದ್ರ ಸರಕಾರಕ್ಕೆ ಮನವಿ ಮಾಡಿದರು.

ವಾರ್ತಾಭಾರತಿ

# ದೇಶಕ್ಕೆ ಮೈಲಾರ ಮಹದೇವರ ಕೊಡುಗೆ ಅಪಾರ: ಮನೋಜ್ ಸಿನ್ಹಾ

## ಹುತಾತ್ಮ ಮೈಲಾರ ಮಹದೇವ ಅಂಚೆ ಚೀಟಿ ಲೋಕಾರ್ಪಣೆ

ಬೆಂಗಳೂರು, ಸೆ.3: ಹುತಾತ್ಮ ಮೈಲಾರ ಮಹದೇವರು ಈ ದೇಶಕ್ಕೆ ಅಪಾರ ಕೊಡುಗೆ ನೀಡಿದ್ದು, ಅವರ ತ್ಯಾಗ, ಬಲಿದಾನ ಇಂದಿಗೂ ಮಾರ್ಗದರ್ಶನವಾಗಿದೆ ಎಂದು ಕೇಂದ್ರದ ಸಂಪರ್ಕ ಸಂವಹನ ಸಚಿವ ಮನೋಜ್ ಸಿನ್ಹಾ ತಿಳಿಸಿದರು.

ಸೋಮವಾರ ನಗರದ ಗಾಂಧಿ ಭವನದಲ್ಲಿ ಕೇಂದ್ರ ಸಂಪರ್ಕ ಸಂವಹನ ಇಲಾಖೆ, ಗಾಂಧಿ ಸ್ಮಾರಕ ನಿಧಿ ಸಹಯೋಗದೊಂದಿಗೆ ಏರ್ಪಡಿಸಿದ್ದ ಹುತಾತ್ಮ ಮೈಲಾರ ಮಹದೇವ ಸ್ಮರಣಾರ್ಥ ಅಂಚೆ ಚೀಟಿ ಲೋಕಾರ್ಪಣೆ ಸಮಾರಂಭ ಉದ್ಘಾಟಿಸಿ ಅವರು ಮಾತನಾಡಿದರು.

ದೇಶದ ಸ್ವಾತಂತ್ರ್ಯಕ್ಕಾಗಿ ಸಂಸಾರ ತೊರೆದು ಬ್ರಿಟಿಷರ ಗುಂಡೇಟಿಗೆ ಎದೆಯೊಡ್ಡಿ ಅದೆಷ್ಟೋ ಮಂದಿ ಹುತಾತ್ಮರಾಗಿದ್ದಾರೆ. ಆದರೆ, ಗಾಂಧೀಜಿ ಹೊರತು ಪಡಿಸಿದರೆ ಮಹದೇವ ಅವರ ಕುಟುಂಬ ಮಾತ್ರ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ತೊಡಗಿಕೊಂಡಿತ್ತು ಎಂದು ಸ್ಮರಿಸಿದರು.

ಮಹದೇವ ಅವರು ಗಾಂಧೀಜಿ ನೇತೃತ್ವದ ಉಪ್ಪಿನ ಸತ್ಯಾಗ್ರಹದಲ್ಲಿ ಕನ್ನಡ ನಾಡನ್ನು ಪ್ರತಿನಿಧಿಸಿದ್ದರು. ಅಂತಹ ವ್ಯಕ್ತಿಯನ್ನು ಹಾಗೂ ಅವರ ವಿಚಾರಧಾರೆಗಳನ್ನು ನಾವುಗಳು ಎಂದಿಗೂ ಮರೆಯಬಾರದು. ಅನೇಕ ಮಹನೀಯರ ತ್ಯಾಗ, ಬಲಿದಾನದ ಫಲವಾಗಿ ದೇಶಕ್ಕೆ ಸ್ವಾತಂತ್ರ್ಯ ಲಭಿಸಿದೆ ಎಂದರು.



> ಸಂತ ಶಿಶುನಾಳ ಶರೀಫ್ ಅವರ ನೆನಪಿನಲ್ಲಿ ಅಂಚೆ ಚೀಟಿ ಹೊರ ತರುವ ಉದ್ದೇಶದಿಂದ ಕೇಂದ್ರಕ್ಕೆ ಮನವಿ ನೀಡಲಾಗಿದ್ದು, ಈ ಸಂಬಂಧ ಮನೋಜ್ ಸಿನ್ಹಾ ಸಹಕಾರ ನೀಡಬೇಕು.
>
> -ಜಗದೀಶ್ ಶೆಟ್ಟರ್, ಮಾಜಿ ಮುಖ್ಯಮಂತ್ರಿ

ಮಾಜಿ ಮುಖ್ಯಮಂತ್ರಿ ಜಗದೀಶ್ ಶೆಟ್ಟರ್ ಮಾತನಾಡಿ, ಮೈಲಾರ ಅವರು ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭೂಗತರಾಗಿ ಏರು ತಿಂಗಳುಗಳ ದೀರ್ಘಕಾಲ ಅವರು ಮಾಡಿದ ಸಾಹಸ, ಪಟ್ಟ ಕಷ್ಟ, ತೋರಿದ ಧೀರುತನ ಅಸಾಧಾರಣ. ಮಾಡು ಇಲ್ಲವೆ ಮಡಿ ಎಂಬ ಗಾಂಧೀಜಿಯ ಕರೆಯಂತೆ ಮಾಡಿ ಮಡಿದ ಧೀರ, ಉದಾರ ಎಂದು ಬಣ್ಣಿಸಿದರು.

ಗಾಂಧೀಜಿ 1930ರಲ್ಲಿ ಹೂಡಿದ ಉಪ್ಪಿನ ಸತ್ಯಾಗ್ರಹದ ವೇಳೆ ದಂಡಿಗೆ ನಡೆದ ದೀರ್ಘ ಕಾಲು ನಡಿಗೆಯ ಯಾತ್ರೆಯಲ್ಲಿ ಪಾಲ್ಗೊಂಡ 78 ಸತ್ಯಾಗ್ರಹಿಗಳಲ್ಲಿ ಮಹದೇವ ಕರ್ನಾಟಕದ ಏಕಮಾತ್ರ ಪ್ರತಿನಿಧಿ. ಆಶ್ರಮದ ದಾಖಲೆಯಲ್ಲಿ ಮೈಲಾರ ಮಹಾನಂದ ಎಂದು ಇದೆ. ಮುಂದೆ ಆಗ ನಡೆದ ಉಪ್ಪಿನ ಸತ್ಯಾಗ್ರಹದಲ್ಲಿ ಪಾಲುಗೊಂಡ ಮಹದೇವ ಅವರು ಬಂಧಿತರಾಗಿ ಒಂದು ವರ್ಷ ಜೈಲು ಶಿಕ್ಷೆ ಅನುಭವಿಸಿದರು ಎಂದು ಹೇಳಿದರು.

ಸಂಸದ ಶಿವಕುಮಾರ್ ಉದಾಸಿ, ರಾಜ್ಯ ವೃತ್ತದ ಚೀಫ್ ಪೋಸ್ಟ್ ಮಾಸ್ಟರ್ ಜನರಲ್ ಡಾ.ಚಾರ್ಲ್ಸ್ ಲೋಬೋ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಮೈಲಾರ ಮಹದೇವ ಅವರ ಪುತ್ರಿ ಕಸ್ತೂರಿ ದೇವಿ ಸಿದ್ದಲಿಂಗಯ್ಯ ಸೇರಿದಂತೆ ಪ್ರಮುಖರಿದ್ದರು.

ಬೆಂಗಳೂರು **ಉದಯವಾಣಿ**
ಮಂಗಳವಾರ, ಸೆಪ್ಟೆಂಬರ್ 4, 2018

ಕೇಂದ್ರ ಸಚಿವರಿಂದ ವಿಶೇಷ ಅಂಚೆ ಚೀಟಿ ಬಿಡುಗಡೆ | ಮಹದೇವಪ್ಪ ಕೊಡುಗೆ ಕೊಂಡಾಡಿದ ಮನೋಜ್ ಸಿನ್ಹಾ

# ಮೈಲಾರ ಮಹದೇವಪ್ಪ ತ್ಯಾಗ ಮಾದರಿ

**ಬೆಂಗಳೂರು:** ಹುತಾತ್ಮ ಮೈಲಾರ ಮಹದೇವಪ್ಪ ಅವರ ತ್ಯಾಗ, ಬಲಿದಾನ ನಮಗೆಲ್ಲರಿಗೂ ಮಾರ್ಗದರ್ಶನ ಎಂದು ಕೇಂದ್ರ ದೂರಸಂಪರ್ಕ ಸಚಿವ ಮನೋಜ್ ಸಿನ್ಹಾ ಅಭಿಪ್ರಾಯ ವ್ಯಕ್ತಪಡಿಸಿದರು.

ನಗರದ ಗಾಂಧಿಭವನದಲ್ಲಿ ಸೋಮವಾರ ಕೇಂದ್ರ ದೂರಸಂಪರ್ಕ ಸಚಿವಾಲಯ, ಗಾಂಧಿಸ್ಮಾರಕ ನಿಧಿ ಸಹಯೋಗದಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಹುತಾತ್ಮ ಮೈಲಾರ ಮಹದೇವಪ್ಪ ಅವರ ಸ್ಮರಣಾರ್ಥ ಹೊರತಂದಿದ್ದ ಅಂಚೆಚೀಟಿ ಲೋಕಾರ್ಪಣೆ ಮಾಡಿ ಮಾತನಾಡಿದರು.

ಗಾಂಧೀಜಿಯವರು ಕೈಗೊಂಡಿದ್ದ ದಂಡಿ ಸತ್ಯಾಗ್ರಹದಲ್ಲಿ ಮೈಲಾರ ಮಹದೇವಪ್ಪ ಅವರು ಸಕ್ರಿಯವಾಗಿದ್ದು, ಕರ್ನಾಟಕದಲ್ಲಿ ಬಹಳದೊಡ್ಡ ಸಾಧನೆ ಮಾಡಿದ್ದರು. ದೇಶದ ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರ ವಿರುದ್ಧ ಹೋರಾಡಿ ಅದೆಷ್ಟೋ ಮಂದಿ ಹುತಾತ್ಮರಾಗಿದ್ದರು. ಈ ಸಾಲಿನಲ್ಲಿ ಮಹದೇವಪ್ಪ ಕೂಡ ಸೇರಿದ್ದಾರೆ. ಅವರ ತ್ಯಾಗ, ಬಲಿದಾನ ನಮಗೆ ಪ್ರೇರಣೆ, ಆದರ್ಶವಾಗಿದೆ ಎಂದರು.




ಗಾಂಧಿಭವನದಲ್ಲಿ ಸೋಮವಾರ ನಡೆದ ಕಾರ್ಯಕ್ರಮದಲ್ಲಿ ಕೇಂದ್ರ ದೂರಸಂಪರ್ಕ ಸಚಿವ ಮನೋಜ್ ಸಿನ್ಹಾ ಅವರು ಹುತಾತ್ಮ ಮೈಲಾರ ಮಹದೇವಪ್ಪ ಅವರ ಅಂಚೆಚೀಟಿ ಲೋಕಾರ್ಪಣೆ ಮಾಡಿದರು.

ಮೈಲಾರ ಮಹದೇವಪ್ಪನವರ ವ್ಯಕ್ತಿತ್ವ ಹಾಗೂ ವಿಚಾರ ಧಾರೆಯನ್ನು ಎಂದಿಗೂ ಮರೆಯಬಾರದು. ದೇಶದ ಸ್ವಾತಂತ್ರ್ಯಕ್ಕಾಗಿ ಕೊನೆಯ ವರೆಗೂ ಗಾಂಧೀಜಿಯವರ ಪರವಾಗಿ ಅಖಂಡ ಕರ್ನಾಟಕದಲ್ಲಿ ದಂಡಿ ಸತ್ಯಾಗ್ರಹ ನಡೆಸಿದ ಮಹಾನ್ ಚೇತನ ಅವರು ಎಂದು ಬಣ್ಣಿಸಿದರು.

ಮಾಜಿ ಮುಖ್ಯಮಂತ್ರಿ ಜಗದೀಶ್ ಶೆಟ್ಟರ್ ಮಾತನಾಡಿ, ಮಾಡು ಇಲ್ಲವೇ ಮಡಿ ಎಂದು ಗಾಂಧೀಜಿಯವರು ನೀಡಿದ ಘೋಷಣೆಯಂತೆ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಮಡಿದ ಧೀರ ನಮ್ಮ ಮೈಲಾರ ಮಹದೇವಪ್ಪ ಎಂದು ಸ್ಮರಿಸಿದರು. ಸಂತ ಶಿಶುನಾಳ ಶರೀಫರ ಹೆಸರಿನಲ್ಲಿ ಅಂಚೆ ಚೀಟಿ ಹೊರತರುವಂತೆ ಕೇಂದ್ರಕ್ಕೆ ಮನವಿ ಮಾಡಿದ್ದೇವೆ. ಈ ಸಂಬಂಧ ಆದಷ್ಟು ಬೇಗ ಕ್ರಮ ತೆಗೆದುಕೊಳ್ಳುವಂತೆ ಕೇಂದ್ರ ಸಚಿವರಿಗೆ ಮನವಿ ಮಾಡಿದರು. ಮಹಾತ್ಮಾಗಾಂಧಿಯವರು ನಡೆಸಿದ ಉಪ್ಪಿನ ಸತ್ಯಾಗ್ರಹದಲ್ಲಿ ಮೈಲಾರ ಮಹದೇವಪ್ಪ ಅವರು ಭಾಗವಹಿಸಿರುವ ಭಾವಚಿತ್ರ ಪ್ರದರ್ಶನ ಕಾರ್ಯಕ್ರಮದಲ್ಲಿ ನೆರೆದಿದ್ದವರು ಮೆಚ್ಚುಗೆಗೆ ಪಾತ್ರವಾಗಿತ್ತು.

ಸಂಸದ ಶಿವಕುಮಾರ್ ಉದಾಸಿ, ಕರ್ನಾಟಕ ವೃತ್ತದ ಚೀಫ್‌ಪೋಸ್ಟ್ ಮಾಸ್ಟರ್ ಜನರಲ್ ಡಾ.ಚಾರ್ಲ್ಸ್ ಲೋಬೋ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಮೈಲಾರ ಮಹದೇವಪ್ಪ ಅವರ ಪುತ್ರಿ ಕಸ್ತೂರಿ ದೇವಿ ಲಿಂಗಯ್ಯ ಮೊದಲಾದವರು ಇದ್ದರು.

ಕನ್ನಡಪ್ರಭ ಮಂಗಳವಾರ 4.9.2018

# ಶಿಶುನಾಳ ಷರೀಫರ ಅಂಚೆ ಚೀಟಿ ಬಿಡುಗಡೆಗೆ ಒಪ್ಪಿಗೆ

## ರೈಲ್ವೆ ಖಾತೆ ರಾಜ್ಯ ಸಚಿವ ಮನೋಜ್ ಸಿನ್ಹಾ ಒಪ್ಪಿಗೆ। ಹುತಾತ್ಮ ಮೈಲಾರ ಮಹಾದೇವಪ್ಪ ಸಂಸ್ಮರಣಾ ಅಂಚೆ ಚೀಟಿ ಬಿಡುಗಡೆ

• ಕನ್ನಡಪ್ರಭ ವಾರ್ತೆ ಬೆಂಗಳೂರು

ಸಂತ ಶಿಶುನಾಳ ಶರೀಫರ ಸ್ಮರಣಾರ್ಥ ವಿಶೇಷ ಅಂಚೆಚೀಟಿ ತರಲು ಕೇಂದ್ರದ ಸಂಪರ್ಕ ಸಂವಹನ ಹಾಗೂ ರೈಲ್ವೆ ರಾಜ್ಯ ಖಾತೆ ಸಚಿವ ಮನೋಜ್ ಸಿನ್ಹಾ ಒಪ್ಪಿಗೆ ಸೂಚಿಸಿದರು.

ಕುಮಾರ ಕೃಪಾ ರಸ್ತೆಯಲ್ಲಿರುವ ಗಾಂಧಿ ಭವನದಲ್ಲಿ ಸೋಮವಾರ ಗಾಂಧಿ ಸ್ಮಾರಕ ನಿಧಿ ಆಯೋಜಿಸಿದ್ದ 'ಹುತಾತ್ಮ ಮೈಲಾರ ಮಹಾದೇವಪ್ಪ ಸಂಸ್ಮರಣಾ ಅಂಚೆಚೀಟಿ' ಬಿಡುಗಡೆ ಸಮಾರಂಭದಲ್ಲಿ ಮಾಜಿ ಮುಖ್ಯಮಂತ್ರಿ ಜಗದೀಶ್ ಶೆಟ್ಟರ್ ಅವರು ಶಿಶುನಾಳ ಷರೀಫ ಅವರ ವಿಶೇಷ ಅಂಚೆ ಚೀಟಿ ತರಬೇಕು ಎಂದು ಮಾಡಿದ ಮನವಿಗೆ ಸ್ಪಂದಿಸಿದ ಸಿನ್ಹಾ ಶೀಘ್ರ ಶರೀಫರ ಅಂಚೆ ಚೀಟಿ ಹೊರತರಲಾಗುವುದು ಎಂದರು.

ಮೈಲಾರ ಮಹಾದೇವಪ್ಪ ಅವರು ಅಪ್ರತಿಮ ದೇಶಭಕ್ತ. ಸ್ವಾತಂತ್ರ್ಯ ಹೋರಾಟಗಾರರಿದ್ದರು. ಅವರ ತ್ಯಾಗ, ಬಲಿದಾನ ನಮಗೆ ಆದರ್ಶವಾಗಿದೆ. ಮಹಾತ್ಮಗಾಂಧೀಜಿ ಅವರು 1930ರಲ್ಲಿ ಕೈಗೊಂಡಿದ್ದ ಉಪ್ಪಿನ ಸತ್ಯಾಗ್ರಹದಲ್ಲಿ ಪಾಲ್ಗೊಂಡಿದ್ದ 71 ಮಂದಿ ಪೈಕಿ ಕರ್ನಾಟಕದಿಂದ ಮೈಲಾರ ಮಹದೇವಪ್ಪ ಪ್ರತಿನಿಧಿಸಿದ್ದರು. ಅಂತಹ ವ್ಯಕ್ತಿಯನ್ನು ಮತ್ತು ಅವರ




ಗಾಂಧಿ ಭವನದಲ್ಲಿ ಸೋಮವಾರ ಸ್ವಾತಂತ್ರ್ಯ ಹೋರಾಟಗಾರ 'ಹುತಾತ್ಮ ಮೈಲಾರ ಮಹಾದೇವಪ್ಪ ಸಂಸ್ಮರಣಾ ಅಂಚೆ ಚೀಟಿ'ಯನ್ನು ಕೇಂದ್ರ ಸಚಿವ ಮನೋಜ್ ಸಿನ್ಹಾ ಬಿಡುಗಡೆ ಮಾಡಿದರು. ಮಾಜಿ ಮುಖ್ಯಮಂತ್ರಿ ಜಗದೀಶ್ ಶೆಟ್ಟರ್, ಸಂಸದ ಶಿವಕುಮಾರ್ ಉದಾಸಿ, ಕರ್ನಾಟಕ ವೃತ್ತದ ಚೀಫ್ ಪೋಸ್ಟ್ ಮಾಸ್ಟರ್ ಜನರಲ್ ಡಾ. ಚಾರ್ಲ್ಸ್ ಲೋಬೋ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಪಾಲ್ಗೊಂಡಿದ್ದರು.

ವಿಚಾರಧಾರೆಗಳನ್ನು ಎಂದಿಗೂ ಮರೆಯಲಾಗದು ಎಂದು ಸ್ಮರಿಸಿದರು.

**ಅಗ್ರಗಣ್ಯ:** ಮಾಜಿ ಮುಖ್ಯಮಂತ್ರಿ ಜಗದೀಶ್ ಶೆಟ್ಟರ್ ಮಾತನಾಡಿ, ಮೈಲಾರ ಮಹದೇವ ಅವರು ಸ್ವಾತಂತ್ರ್ಯ ಚಳವಳಿಯಲ್ಲಿ ರಾಜ್ಯವನ್ನು ಪ್ರತಿನಿಧಿಸಿದ್ದ ಅಗ್ರಗಣ್ಯರಾಗಿದ್ದರು. ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭೂಗತರಾಗಿ ಏಳು ತಿಂಗಳಿಗೂ ದೀರ್ಘಕಾಲ ಅವರು ಮಾಡಿದ ಸಾಹಸ, ಪಟ್ಟ ಕಷ್ಟ ಅಸಾಧಾರಣ. 'ಮಾಡು ಇಲ್ಲವೆ ಮಡಿ' ಎಂಬ ಗಾಂಧೀಜಿಯ ಕರೆಯಂತೆ ದೇಶಕ್ಕಾಗಿ ಪ್ರಾಣತ್ಯಾಗ ಮಾಡಿದ ವೀರ. ಅವರ ನೆನಪಿನಲ್ಲಿ ಅಂಚೆ ಚೀಟಿ ತರುವ ಮೂಲಕ ಗೌರವ ಸಮರ್ಪಿಸಲಾಗುತ್ತಿದೆ. ಅದೇ ರೀತಿ ಸಾಮರಸ್ಯದ ಸಂಕೇತವಾಗಿ ಬದುಕಿದ ಶರೀಫರ ಅಂಚೆ ಚೀಟಿಯನ್ನು ಹೊರ ತರಬೇಕು ಎಂದು ಹೇಳಿದರು. ಇದೇ ವೇಳೆ 1930ರಲ್ಲಿ ಮಹಾತ್ಮ ಗಾಂಧಿಯವರ ನೇತೃತ್ವದಲ್ಲಿ ಹಮ್ಮಿಕೊಂಡಿದ್ದ ಉಪ್ಪಿನ ಸತ್ಯಾಗ್ರಹದ ವಿಶೇಷ ಭಾವಚಿತ್ರಗಳನ್ನು ಪ್ರಕಟಿಸಲಾಗಿತ್ತು. ಕಾರ್ಯಕ್ರಮದಲ್ಲಿ ಸಂಸದ ಶಿವಕುಮಾರ್ ಸಿ.ಉದಾಸಿ, ಕರ್ನಾಟಕ ವೃತ್ತದ ಚೀಫ್ ಪೋಸ್ಟ್ ಮಾಸ್ಟರ್ ಜನರಲ್ ಡಾ. ಚಾರ್ಲ್ಸ್ ಲೋಬೋ ಪಾಲ್ಗೊಂಡಿದ್ದರು.

ಸಂಯುಕ್ತ ಕರ್ನಾಟಕ ಪತ್ರಿಕೆ

ಮಂಗಳವಾರ | 04 ಸೆಪ್ಟೆಂಬರ್, 2018

# ಮೈಲಾರ ಮಹದೇವಪ್ಪರ ತ್ಯಾಗದ ಸ್ಮರಣೆ



ಕೇಂದ್ರದ ಸಂವಹನ ಇಲಾಖೆ ಮತ್ತು ಗಾಂಧಿ ಸ್ಮಾರಕ ನಿಧಿ ವತಿಯಿಂದ ನಡೆದ ಕಾರ್ಯಕ್ರಮದಲ್ಲಿ ಸ್ವಾತಂತ್ರ್ಯ ಹೋರಾಟಗಾರ ಮೈಲಾರ ಮಹದೇವಪ್ಪ ಅವರ ಅಂಚೆ ಚೀಟಿ ರೈಲ್ವೆ ರಾಜ್ಯ ಸಚಿವ ಮನೋಜ್ ಸಿನ್ಹಾ ಲೋಕಾರ್ಪಣೆಗೊಳಿಸಿದರು.

**ಸಂ.ಕ ಸಮಾಚಾರ ಬೆಂಗಳೂರು**

ಸ್ವಾತಂತ್ರ್ಯ ಹೋರಾಟಗಾರ ಮೈಲಾರ ಮಹದೇವಪ್ಪ ಅವರ ತ್ಯಾಗ, ಭಲಿದಾನ ನಮಗೆ ಸ್ಫೂರ್ತಿದಾಯಕ ಎಂದು ರೈಲ್ವೆ ರಾಜ್ಯ ಸಚಿವ ಮನೋಜ್ ಸಿನ್ಹಾ ಹೇಳಿದರು.

ಕೇಂದ್ರದ ಸಂವಹನ ಇಲಾಖೆ ಮತ್ತು ಗಾಂಧಿ ಸ್ಮಾರಕ ನಿಧಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಹುತಾತ್ಮ ಮೈಲಾರ ಮಹಾದೇವಪ್ಪ ಅವರ ಸ್ಮಾರಣಾರ್ಥ ಅಂಚೆ ಚೀಟಿ ಲೋಕಾರ್ಪಣೆಗೊಳಿಸಿ ಮಾತನಾಡಿದ ಅವರು, ಗಾಂಧೀಜಿ ಅವರು ಕೈಗೊಂಡ ದಂಡಿಯಾತ್ರೆಯಲ್ಲಿ ಕರ್ನಾಟಕದ ನೂರಾರು ಜನರು ಭಾಗವಹಿಸಿದ್ದು ಧಾರವಾಡ ಜಿಲ್ಲೆಯಿಂದ ಮಹಾದೇವಪ್ಪ ಮೈಲಾರ ಪಾಲ್ಗೊಂಡು ಬಹುದೊಡ್ಡ ಸಾಧನೆ ಮಾಡಿದ್ದರು.

ಸ್ವಾತಂತ್ರ್ಯ ಹೋರಾಟದಲ್ಲಿ ಲಕ್ಷಾಂತರ ಜನರು ಮನೆ ತೊರೆದು ಬ್ರಿಟಿಷರ ಗುಂಡೇಟಿಗೆ ಎದೆಯೊಡ್ಡಿಹುತಾತ್ಮರಾಗಿದ್ದಾರೆಂದು ಸ್ಮರಿಸಿದರು.

ಮಹಾದೇವಪ್ಪ ಅವರು ಉಪ್ಪಿನ ಸತ್ಯಾಗ್ರಹದಲ್ಲಿ ಕನ್ನಡ ನಾಡನ್ನು ಪ್ರತಿನಿಧಿಸಿದ್ದು ಅವರ ವಿಚಾರಧಾರೆಗಳನ್ನು ಎಂದಿಗೂ ಮರೆಯಬಾರದು.

ಸಂತ ಶಿಶುನಾಳ ಶರೀಫ್ ಅವರ ನೆನಪಿನಲ್ಲಿ ಅಂಚೆ ಚೀಟಿ ಹೊರ ತರುವ ಉದ್ದೇಶದಿಂದ ಕೇಂದ್ರಕ್ಕೆ ಮನವಿ ನೀಡಲಾಗಿದ್ದು, ಈ ಸಂಬಂಧ ಮನೋಜ್ ಸಿನ್ಹಾ ಸಹಕಾರ ನೀಡಬೇಕು

–ಜಗದೀಶ್ ಶೆಟ್ಟರ್
ಮಾಜಿ ಮುಖ್ಯಮಂತ್ರಿ

ಸ್ವಾತಂತ್ರ್ಯಕ್ಕೆ ಹೋರಾಡಿದ ಕೆಲವರು ಜೈಲು ಸೇರಿದ್ದು ಇನ್ನು ಕೆಲವರು ಬ್ರಿಟಿಷರ ಗುಂಡಿಗೆ ಬಲಿಯಾಗಿದ್ದಾರೆಂದು ನೆನಪು ಮಾಡಿಕೊಂಡರು.

ಮಾಜಿ ಮುಖ್ಯಮಂತ್ರಿ ಜಗದೀಶ್ ಶೆಟ್ಟರ್ ಮಾತನಾಡಿ, ಮೈಲಾರ ಅವರು 'ಸ್ವಯಂ ಸ್ಫೂರ್ತಿಯಿಂದ ದೀಪಕ್ಕೆರಗಿದ ಹಾರುಹುಳು ಇದ್ದಂತೆ. ಪ್ರಾಣನೀಗಿದ ಪುಣ್ಯ ಪುರುಷನಾಗಿದ್ದು ಸ್ವಾತಂತ್ರ್ಯ ಚಳವಳಿಯಲ್ಲಿ ಕರ್ನಾಟಕದಿಂದ ಗಾಂಧೀಯುಗದಲ್ಲಿ ಬಲಿದಾನ ಮಾಡಿದ ವೀರಯೋಧರಲ್ಲಿ ಅಗ್ರಗಣ್ಯರು' ಎಂದು ಸ್ಮರಿಸಿದರು.

ಸಂಸದ ಶಿವಕುಮಾರ್ ಸಿ. ಉದಾಸಿ, ಕರ್ನಾಟಕ ವೃತ್ತದ ಮುಖ್ಯ ಪೋಸ್ಟ್ ಮಾಸ್ಟರ್ ಜನರಲ್ ಡಾ. ಚಾರ್ಲ್ಸ್ ಲೋಬೋ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವುಡೇ ಪಿ. ಕೃಷ್ಣ, ಮೈಲಾರ ಮಹಾದೇವಪ್ಪ ಅವರ ಪುತ್ರಿ ಕಸ್ತೂರಿ ದೇವಿ ಸಿದ್ದಲಿಂಗಯ್ಯ ಮತ್ತಿತರರಿದ್ದರು.

ವಿಜಯ ಕರ್ನಾಟಕ ಮಂಗಳವಾರ, 4 ಸೆಪ್ಟೆಂಬರ್ 2018

## ರೈಲ್ವೆ ರಾಜ್ಯ ಖಾತೆ ಸಚಿವ ಮನೋಜ್ ಸಿನ್ಹಾ ಅವರಿಂದ ಲೋಕಾರ್ಪಣೆ

# ಮೈಲಾರ ಸ್ಮರಣಾರ್ಥ ಅಂಚೆಚೀಟಿ ಬಿಡುಗಡೆ

**ವಿಕ ಸುದ್ದಿಲೋಕ** ಬೆಂಗಳೂರು

ಅಪ್ರತಿಮ, ದೇಶಭಕ್ತಿ ಹೊಂದಿದ್ದ ಹುತಾತ್ಮ ಮಹದೇವಪ್ಪ ಮೈಲಾರ ಅವರು ಗಾಂಧೀಜಿಯವರ ನೇತೃತ್ವದ ಉಪ್ಪಿನ ಸತ್ಯಾಗ್ರಹದಲ್ಲಿ ಕನ್ನಡ ನಾಡನ್ನು ಪ್ರತಿನಿಧಿಸಿದ್ದ ಏಕೈಕ ವ್ಯಕ್ತಿ. ಅಂಥವರ ವಿಚಾರಧಾರೆಗಳನ್ನು ಎಂದಿಗೂ ಮರೆಯಬಾರದು ಎಂದು ಕೇಂದ್ರ ಸಂಪರ್ಕ ಸಂವಹನ ಹಾಗೂ ರೈಲ್ವೆ ರಾಜ್ಯ ಖಾತೆ ಸಚಿವ ಮನೋಜ್ ಸಿನ್ಹಾ ಹೇಳಿದರು.

ಕೇಂದ್ರದ ಸಂವಹನ ಇಲಾಖೆ, ಗಾಂಧಿ ಸ್ಮಾರಕ ನಿಧಿ ಸಹಯೋಗದೊಂದಿಗೆ ಆಯೋಜಿಸಿದ್ದ ಹುತಾತ್ಮ ಮಹದೇವಪ್ಪ ಮೈಲಾರ ಅವರ ಸ್ಮರಣಾರ್ಥ ಭಾರತೀಯ ಅಂಚೆ ಇಲಾಖೆ ಹೊರತಂದಿರುವ ವಿಶೇಷ ಅಂಚೆ ಚೀಟಿಯನ್ನು ಲೋಕಾರ್ಪಣೆ ಮಾಡಿ ಸೋಮವಾರ ಅವರು ಮಾತನಾಡಿದರು.

ಗಾಂಧೀಜಿಯವರು ಕೈಗೊಂಡ ದಂಡಿ ಯಾತ್ರೆಯಲ್ಲಿ 71 ಜನ ಭಾಗವಹಿಸಿದ್ದು, ಅದರಲ್ಲಿ ಮುಂಬಯಿ ಕರ್ನಾಟಕದ ಅಖಂಡ ಧಾರವಾಡ ಜಿಲ್ಲೆಯಿಂದ ಮಹಾದೇವಪ್ಪ ಮೈಲಾರ ಪಾಲ್ಗೊಂಡು ಬಹುದೊಡ್ಡ ಸಾಧನೆ ಮಾಡಿದರು,'' ಎಂದರು. ಮಾಜಿ ಮುಖ್ಯಮಂತ್ರಿ ಜಗದೀಶ್ ಶೆಟ್ಟರ್ ಮಾತನಾಡಿ, ''ಗಾಂಧೀಜಿಯವರು ಹೂಡಿದ್ದ ಉಪ್ಪಿನ ಸತ್ಯಾಗ್ರಹಕ್ಕೆ 72 ಮಂದಿಯನ್ನು ಆರಿಸಿದ್ದರು. ಈ ಪೈಕಿ ಮಹಾದೇವಪ್ಪ ಮೈಲಾರ ಕೂಡ ಒಬ್ಬರು'' ಎಂದರು.



ಮೈಲಾರ ಮಹದೇವಪ್ಪ ಅವರ ಸ್ಮರಣಾರ್ಥ ಅಂಚೆ ಇಲಾಖೆ ಹೊರತಂದಿರುವ ವಿಶೇಷ ಅಂಚೆ ಚೀಟಿಯನ್ನು ಲೋಕಾರ್ಪಣೆ ಮಾಡಲಾಯಿತು.

ಕಾರ್ಯಕ್ರಮದಲ್ಲಿ ಸಂಸದ ಶಿವಕುಮಾರ್ ಸಿ. ಉದಾಸಿ, ಅಂಚೆ ಇಲಾಖೆಯ ಕರ್ನಾಟಕ ವೃತ್ತದ ಚೀಫ್ ಪೋಸ್ಟ್ ಮಾಸ್ಟರ್ ಜನರಲ್ ಡಾ. ಚಾರ್ಲ್ಸ್ ಲೋಬೊ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೆ ಪಿ. ಕೃಷ್ಣ, ಮಹದೇವಪ್ಪ ಮೈಲಾರ ಅವರ ಪುತ್ರಿ ಕಸ್ತೂರಿದೇವಿ ಸಿದ್ದಲಿಂಗಯ್ಯ ಇದ್ದರು.

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ
ಮಂಗಳವಾರ 4 ಸೆಪ್ಟೆಂಬರ್ 2018 ● 4 SEPTEMBER 2018

# ಮೈಲಾರ ಮಹದೇವಪ್ಪಗೆ ಸಿಗದ ಮನ್ನಣೆ

## ಕೇಂದ್ರ ಸಚಿವ ಮನೋಜ್ ಸಿನ್ಹಾ ಬೇಸರ । ಅಂಚೆಚೀಟಿ ಬಿಡುಗಡೆ

□ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಮೈಲಾರ ಮಹದೇವಪ್ಪ ಅವರಿಗೆ ಇತಿಹಾಸಕಾರರು ಹೆಚ್ಚಿನ ಪ್ರಾಮುಖ್ಯತೆ ನೀಡಿಲ್ಲ ಎಂದು ಕೇಂದ್ರ ಸಚಿವ ಮನೋಜ್ ಸಿನ್ಹಾ ಬೇಸರ ವ್ಯಕ್ತಪಡಿಸಿದ್ದಾರೆ.

ಗಾಂಧಿ ಸ್ಮಾರಕ ನಿಧಿ ಸಹಯೋಗದೊಂದಿಗೆ ಕೇಂದ್ರದ ಸಂವಹನ ಇಲಾಖೆ ಸೋಮವಾರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಮೈಲಾರ ಮಹದೇವಪ್ಪ ಸ್ಮರಣಾರ್ಥ ಹೊರತಂದಿರುವ ಅಂಚೆಚೀಟಿ ಲೋಕಾರ್ಪಣೆ ಮಾಡಿ ಮಾತನಾಡಿದರು. ಮಹದೇವಪ್ಪ ಅಪ್ರತಿಮ ದೇಶಭಕ್ತಿ ಹೊಂದಿದ್ದರು. ಅವರ ತ್ಯಾಗ, ಬಲಿದಾನ ನಮಗೆ ಅನುಕರಣೀಯ ಎಂದರು.

ಗಾಂಧೀಜಿ ನೇತೃತ್ವದಲ್ಲಿ ನಡೆದ ಉಪ್ಪಿನ ಸತ್ಯಾಗ್ರಹದಲ್ಲಿ ಮಹದೇವಪ್ಪ ಪಾಲ್ಗೊಂಡಿದ್ದರು. ಅಂಥ ವ್ಯಕ್ತಿಯನ್ನು ಹಾಗೂ ಅವರ ವಿಚಾರಧಾರೆಗಳನ್ನು ಎಂದಿಗೂ ಮರೆಯಬಾರದು. ಅನೇಕ ಮಹನೀಯರ ತ್ಯಾಗ ಮತ್ತು ಬಲಿದಾನದ ಫಲವಾಗಿ ದೇಶಕ್ಕೆ ಸ್ವಾತಂತ್ರ್ಯ ಲಭಿಸಿದೆ ಎಂದು ಸ್ಮರಿಸಿದರು.

ಮಾಜಿ ಮುಖ್ಯಮಂತ್ರಿ ಜಗದೀಶ ಶೆಟ್ಟರ್ ಮಾತನಾಡಿ, ಮೈಲಾರ ಅವರು ಸ್ವಯಂಸ್ಫೂರ್ತಿಯಿಂದ ದೀಪಕ್ಕೆರಗಿದ ಹಾರುಹುಳದಂತೆ ಪ್ರಾಣನೀಗಿದ ಪುಣ್ಯಪುರುಷ. ಸ್ವಾತಂತ್ರ್ಯ ಚಳವಳಿಯಲ್ಲಿ ಬಲಿದಾನ ಮಾಡಿದ ವೀರಯೋಧರಲ್ಲಿ ಪ್ರಮುಖರು ಎಂದರು. ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭೂಗತರಾಗಿ ಅವರು ಮಾಡಿದ ಸಾಹಸ ಅಸಾಧಾರಣ. ಅವರ ನೆನಪಿನಲ್ಲಿ ಅಂಚೆಚೀಟಿ ಹೊರತಂದಿರುವುದು ಸಂತಸ ತಂದಿದೆ ಎಂದರು.



ವಿಜಯವಾಣಿ

ಮೈಲಾರ ಮಹದೇವಪ್ಪ ಸ್ಮರಣಾರ್ಥ ಹೊರತಂದಿರುವ ಅಂಚೆಚೀಟಿಯನ್ನು ಸೋಮವಾರ ಕೇಂದ್ರ ಸಚಿವ ಮನೋಜ್ ಸಿನ್ಹಾ ಬಿಡುಗಡೆ ಮಾಡಿದರು. ಮಾಜಿ ಮುಖ್ಯಮಂತ್ರಿ ಜಗದೀಶ ಶೆಟ್ಟರ್ ಮತ್ತಿತರರಿದ್ದರು.

### ಶಿಶುನಾಳ ಶರೀಫ ನೆನಪಿನಲ್ಲಿ ಅಂಚೆಚೀಟಿ ಹೊರತನ್ನಿ

ಸಂತ ಶಿಶುನಾಳ ಶರೀಫ ನೆನಪಿನಲ್ಲಿ ಅಂಚೆಚೀಟಿ ಹೊರತರುವಂತೆ ಜಗದೀಶ ಶೆಟ್ಟರ್ ಮನವಿ ಮಾಡಿದರು. ಶಿಶುನಾಳ ಶರೀಫ ಅವರಿಗೆ ಗೌರವ ಪ್ರತೀಕವಾಗಿ ಅಂಚೆಚೀಟಿ ಹೊರ ತರಬೇಕು. ಈ ಸಂಬಂಧ ಸಹಕಾರ ನೀಡುವಂತೆ ಮನೋಜ್ ಸಿನ್ಹಾ ಅವರಿಗೆ ಮನವಿ ಮಾಡಿದರು.

ಸಂಸದ ಶಿವಕುಮಾರ್ ಉದಾಸಿ, ಕರ್ನಾಟಕ ವೃತ್ತದ ಚೀಫ್ ಪೋಸ್ಟ್ ಮಾಸ್ಟರ್ ಜನರಲ್ ಡಾ. ಚಾರ್ಲ್ಸ್ ಲೋಬೋ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ ಕೃಷ್ಣ, ಮೈಲಾರ ಮಹದೇವಪ್ಪ ಅವರ ಪುತ್ರಿ ಕಸ್ತೂರಿದೇವಿ ಸಿದ್ದಲಿಂಗಯ್ಯ, ಮೈಲಾರ ಮಹದೇವ ರಾಷ್ಟ್ರೀಯ ಸ್ಮಾರಕ ಟ್ರಸ್ಟ್‌ನ ಟ್ರಸ್ಟಿ ವಿ.ಎನ್. ತಿಪ್ಪನಗೌಡ ಮತ್ತಿತರರಿದ್ದರು.

**ಕಣ್ಮನ ಸೆಳೆದ ಭಾವಚಿತ್ರ ಪ್ರದರ್ಶನ:** 1930ರಲ್ಲಿ ಮಹಾತ್ಮಾ ಗಾಂಧಿ ನೇತೃತ್ವದಲ್ಲಿ ನಡೆದ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದ ಮೈಲಾರ ಮಹದೇವಪ್ಪ ಅವರ ಭಾವಚಿತ್ರಗಳ ಪ್ರದರ್ಶನ ನೋಡುಗರ ಕಣ್ಮನ ಸೆಳೆದವು.

ಸಂಜೆವಾಣಿ | ಸೋಮವಾರ, ಸೆಪ್ಟೆಂಬರ್ 3, 2018

# ಸ್ವಾತಂತ್ರ್ಯ ಹೋರಾಟಗಾರ ಮೈಲಾರ ಮಹಾದೇವಪ್ಪಗೆ ಗೌರವ

ಬೆಂಗಳೂರು,ಸೆ.3– ಹುತಾತ್ಮ ಮೈಲಾರ ಮಹಾದೇವಪ್ಪ ಅವರು ದೇಶದ ಬಗ್ಗೆ ಅಪ್ರತಿಮ ಭಕ್ತಿ ಹೊಂದಿದ್ದರು. ಅವರ ತ್ಯಾಗ, ಬಲಿದಾನ ನಮಗೆ ಮಾರ್ಗದರ್ಶನವಾಗಿದೆ ಎಂದು ಕೇಂದ್ರದ ಸಂಪರ್ಕ ಸಂವಹನ ಹಾಗೂ ರೈಲ್ವೆ ರಾಜ್ಯ ಖಾತೆ ಸಚಿವ ಮನೋಜ್ ಸಿನ್ಹಾ ಹೇಳಿದರು.

ನಗರದಲ್ಲಿಂದು ಕುಮಾರಕೃಪಾದ ಗಾಂಧಿ ಭವನದಲ್ಲಿ ಕೇಂದ್ರದ ಸಂವಹನ ಇಲಾಖೆ ಗಾಂಧಿ ಸ್ಮಾರಕ ನಿಧಿ ಸಹಯೋಗದೊಂದಿಗೆ ಆಯೋಜಿಸಿದ್ದ, ಹುತಾತ್ಮ ಮೈಲಾರ ಮಹಾದೇವಪ್ಪ ಅವರ ಸ್ಮರಣಾರ್ಥ, ಅಂಚೆ ಚೀಟಿ ಲೋಕಾರ್ಪಣೆ ಸಮಾರಂಭದಲ್ಲಿ ಪಾಲ್ಗೊಂಡು ಅವರು ಮಾತನಾಡಿದರು.

ಗಾಂಧೀಜಿಯವರು ಕೈಗೊಂಡ ದಂಡಿ ಯಾತ್ರೆಯಲ್ಲಿ 71 ಜನ ಭಾಗವಹಿಸಿದ್ದು, ಅದರಲ್ಲಿ ಮುಂಬೈ ಕರ್ನಾಟಕದ ಅಖಂಡ ಧಾರವಾಡ ಜಿಲ್ಲೆಯಿಂದ ಮಹಾದೇವಪ್ಪ ಮೈಲಾರ ಪಾಲ್ಗೊಂಡು ಬಹುದೊಡ್ಡ ಸಾಧನೆ ಮಾಡಿದ್ದರು ಎಂದು ತಿಳಿಸಿದರು.

ದೇಶದ ಸ್ವಾತಂತ್ರ್ಯಕ್ಕಾಗಿ ಸಂಸಾರ ತೊರೆದು ಬ್ರಿಟಿಷರ ಗುಂಡೇಟಿಗೆ ಎದೆಯೊಡ್ಡಿ ಅದೆಷ್ಟೋ ಮಂದಿ ಹುತಾತ್ಮರಾಗಿದ್ದಾರೆ. ಆದರೆ, ಗಾಂಧೀಜಿ ಹೊರತು ಪಡಿಸಿದರೆ ಮಹಾದೇವಪ್ಪ ಅವರ ಕುಟುಂಬ ಮಾತ್ರ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ತೊಡಗಿಕೊಂಡಿತ್ತು.

ಮಹಾದೇವಪ್ಪ ಅವರು ಗಾಂಧೀಜಿ ನೇತೃತ್ವದ ಉಪ್ಪಿನ ಸತ್ಯಾಗ್ರಹದಲ್ಲಿ ಕನ್ನಡ ನಾಡನ್ನು ಪ್ರತಿನಿಧಿಸಿದ್ದರು. ಅಂಥ ವ್ಯಕ್ತಿಯನ್ನು ಹಾಗೂ ಅವರ ವಿಚಾರಧಾರೆಗಳನ್ನು ನಾವುಗಳು ಎಂದಿಗೂ ಮರೆಯಬಾರದು ಎಂದ ಅವರು, ಅನೇಕ ಮಹನೀಯರ ತ್ಯಾಗ, ಬಲಿದಾನದ ಫಲವಾಗಿ ದೇಶಕ್ಕೆ ಸ್ವಾತಂತ್ರ್ಯ ಲಭಿಸಿದೆ. ಸ್ವಾತಂತ್ರ್ಯಕ್ಕೆ ಹೋರಾಡಿದ ಕೆಲವರು ಜೈಲು ಸೇರಿದ್ದು, ಇನ್ನು ಕೆಲವರು ಬ್ರಿಟಿಷ್ ಸರ್ಕಾರದ ಗುಂಡಿಗೆ ಬಲಿಯಾಗಿದ್ದಾರೆ ಎಂದು ನೆನಪು ಮಾಡಿಕೊಂಡರು.

ಮಾಜಿ ಮುಖ್ಯಮಂತ್ರಿ ಜಗದೀಶ್ ಶೆಟ್ಟರ್ ಮಾತನಾಡಿ, ಮೈಲಾರ ಅವರು ಸ್ವಯಂ ಸ್ಫೂರ್ತಿಯಿಂದ ದೀಪಕ್ಕೆರಗಿದ ಹಾರುಹುಳದಂತೆ ಪ್ರಾಣನೀಗಿದ ಪುಣ್ಯ ಪುರುಷ. ಸ್ವಾತಂತ್ರ್ಯ ಚಳವಳಿಯಲ್ಲಿ ಕರ್ನಾಟಕದಿಂದ ಗಾಂಧೀಯುಗದಲ್ಲಿ ಬಲಿದಾನ ಮಾಡಿದ ವೀರಯೋಧರಲ್ಲಿ ಅಗ್ರಗಣ್ಯರು ಎಂದು ನುಡಿದರು.

ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭೂಗತರಾಗಿ ಏಳು ತಿಂಗಳಿಗೂ ದೀರ್ಘಕಾಲ ಅವರು ಮಾಡಿದ ಸಾಹಸ, ಪಟ್ಟ ಕಷ್ಟ, ತೋರಿದ ಧಾಡಸಿತನ ಅಸಾಧಾರಣ. 'ಮಾಡು ಇಲ್ಲವೆ ಮಡಿ' ಎಂಬ ಗಾಂಧೀಜಿಯ ಕರೆಯಂತೆ ಮಾಡಿ ಮಡಿದ ಧೀರ, ಎದೆಗಾರ. ದೇಶಕ್ಕಾಗಿ ತ್ಯಾಗ ಮಾಡಬೇಕಾದಾಗ ಪ್ರಾಣವನ್ನೇ ತ್ಯಾಗ ಮಾಡಿದವರು ಎಂದು ಬಣ್ಣಿಸಿದರು.

ಗಾಂಧೀಜಿ 1930ರಲ್ಲಿ ಹೂಡಿದ ಉಪ್ಪಿನ ಸತ್ಯಾಗ್ರಹದ ವೇಳೆಗೆ ದಾಂಡಿಗೆ ನಡೆದ ದೀರ್ಘ ಕಾಲುನಡಿಗೆಯ ಯಾತ್ರೆಯಲ್ಲಿ ಪಾಲ್ಗೊಂಡ 78 ಸತ್ಯಾಗ್ರಹಿಗಳಲ್ಲಿ ಮಹಾದೇವಪ್ಪ ಕರ್ನಾಟಕದ ಏಕಮಾತ್ರ ಪ್ರತಿನಿಧಿ. ಆಶ್ರಮದ ದಾಖಲೆಯಲ್ಲಿ ಮೈಲಾರ ಮಾರ್ತಾಂಡ ಎಂದು ಇವರ ಹೆಸರಿದೆ.

ಆಗ ನಡೆದ ಉಪ್ಪಿನ ಸತ್ಯಾಗ್ರಹದಲ್ಲಿ ಪಾಲ್ಗೊಂಡು ಮಹಾದೇವಪ್ಪ ಇತರರ ಜತೆ ಬಂಧಿತರಾಗಿ ಒಂದು ವರ್ಷ ಜೈಲು ಶಿಕ್ಷೆ ಅನುಭವಿಸಿದರು ಎಂದ ಅವರು, ಮೈಲಾರ ನೆನಪಿನಲ್ಲಿ ಅಂಚೆ ಚೀಟಿ ಹೊರ ತಂದಿರುವುದು ಸಂತಸ ತಂದಿದೆ ಎಂದರು.

ಪ್ರದರ್ಶನ: 1930ನೇ ಸಾಲಿನಲ್ಲಿ ಮಹಾತ್ಮಾ ಗಾಂಧಿಯವರ ನೇತೃತ್ವದಲ್ಲಿ ಜರುಗಿದ ಉಪ್ಪಿನ ಸತ್ಯಾಗ್ರಹ ಸಂದರ್ಭದಲ್ಲಿ ಮೈಲಾರ ಮಹಾದೇವಪ್ಪ ಅವರು ಭಾಗವಹಿಸಿದ್ದ ಛಾಯಾಚಿತ್ರ ಪ್ರದರ್ಶನ ನೋಡುಗರ ಗಮನ ಸೆಳೆಯಿತು.

ಕಾರ್ಯಕ್ರಮದಲ್ಲಿ ಸಂಸದ ಶಿವಕುಮಾರ್ ಸಿ. ಉದಾಸಿ, ಕರ್ನಾಟಕ ವೃತ್ತದ ಚೀಫ್ ಪೋಸ್ಟ್ ಮಾಸ್ಟರ್ ಜನರಲ್ ಡಾ. ಚಾರ್ಲ್ಸ್ ಲೋಬೋ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವುಡೇ ಪಿ. ಕೃಷ್ಣ, ಮೈಲಾರ ಮಹಾದೇವಪ್ಪ ಅವರ ಪುತ್ರಿ ಕಸ್ತೂರಿ ದೇವಿ ಸಿದ್ದಲಿಂಗಯ್ಯ ಸೇರಿದಂತೆ ಪ್ರಮುಖರಿದ್ದರು.




ನಗರದ ಗಾಂಧಿ ಭವನದಲ್ಲಿ ಇಂದು ನಡೆದ ಕಾರ್ಯಕ್ರಮದಲ್ಲಿ ಹುತಾತ್ಮ ಮೈಲಾರ ಮಹದೇವಪ್ಪ ಅವರ ಸ್ಮರಣಾರ್ಥ ಅಂಚೆ ಚೀಟಿಯನ್ನು ಕೇಂದ್ರ ಸಚಿವ ಮನೋಜ್ ಸಿನ್ಹಾ, ಮಾಜಿ ಸಿಎಂ ಜಗದೀಶ್ ಶೆಟ್ಟರ್, ಸಂಸದ ಶಿವಕುಮಾರ್ [illegible] ಸಿ. ಉದಾಸಿ, ಚೀಫ್ ಪೋಸ್ಟ್ ಮಾಸ್ಟರ್ ಜನರಲ್ ಡಾ. ಚಾರ್ಲ್ಸ್ ಲೋಬೋ ಹಾಗೂ [illegible] ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಅವರು ಬಿಡುಗಡೆ ಮಾಡಿದರು.

ಸಂತಸ [illegible] ಅವರ ನೆನಪಿನಲ್ಲಿ ಅಂಚೆ ಚೀಟಿ ಹೊರ [illegible] ಉದ್ದೇಶದಿಂದ ಕೇಂದ್ರಕ್ಕೆ ಮನವಿ ನೀಡಲಾಗಿದ್ದು, ಆ ಸಂಬಂಧ [illegible] ಮಾಜಿ ಮುಖ್ಯಮಂತ್ರಿ ಜಗದೀಶ್ ಶೆಟ್ಟರ್ ಮನವಿ ಮಾಡಿದರು.

ಈ ಸಂಜೆ

ಸೋಮವಾರ,03-09-2018




ನಗರದ ಗಾಂಧಿಭವನದಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಹುತಾತ್ಮ ಮೈಲಾರ ಮಹದೇವಪ್ಪ ಅವರ ಸ್ಮರಣೆಯಲ್ಲಿ ಹೊರತಂದಿರುವ ಅಂಚೆ ಚೀಟಿಯನ್ನು ಕೇಂದ್ರ ಸಚಿವ ಮನೋಜ್ ಸಿನ್ಹ ಬಿಡುಗಡೆಗೊಳಿಸಿದರು. ಮಾಜಿ ಮುಖ್ಯಮಂತ್ರಿ ಜಗದೀಶ್ ಶೆಟ್ಟರ್, ಸಂಸದ ಶಿವಕುಮಾರ್ ಸಿ. ಉದಾಸಿ, ಡಾ. ಚಾರ್ಲ್ಸ್ ಲೋಬೊ, ವೂಡೆ ಪಿ. ಕೃಷ್ಣ ಮತ್ತಿತರರು ಭಾಗವಿಸಿದ್ದರು.

ಸಂಯುಕ್ತ ಕರ್ನಾಟಕ

ಭವಿಷ್ಯದ ನಾಳೆಗೆ ಬುನಾದಿ



ಬುಧವಾರ, 29, ಆಗಸ್ಟ್, 2018

# ಸಂವಿಧಾನ ಭಾರತೀಯರ ಗ್ರಂಥ

ಸಂ.ಕ.ಸಮಾಚಾರ ಬೆಂಗಳೂರು

ಭಗವದ್ಗೀತೆ, ಕುರಾನ್, ಬೈಬಲ್.. ಹೇಗೆ ಧರ್ಮಗಳಿಗೆ ಗ್ರಂಥವಾಗಿಯೂ. ಅದೇ ರೀತಿ ಸಂವಿಧಾನವೂ ಪ್ರತಿಯೊಬ್ಬ ಭಾರತೀಯನ ಗ್ರಂಥವಾಗಿದೆ ಎಂದು ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಹೇಳಿದರು.

ಶೇಷಾದ್ರಿಪುರ ಕಾಲೇಜು ಸಭಾಂಗಣದಲ್ಲಿ ಬಾ ಬಾಪು 150ನೇ ಜನ್ಮ ದಿನಾಚರಣೆ ಅಂಗವಾಗಿ ಆಯೋಜಿಸಿದ್ದ ರಾಷ್ಟ್ರಮಟ್ಟದ ವಿದ್ಯಾರ್ಥಿ ಸಮ್ಮೇಳನದಲ್ಲಿ ಭಾಗವಹಿಸಿ ಮಾತನಾಡಿದ ಅವರು, ಗಾಂಧಿಯವರು ಕೊಡುಗೆ ಕುರಿತು ಯುವ ಪೀಳಿಗೆ ತಿಳಿದುಕೊಳ್ಳಬೇಕೆಂದ ಅವರು, ಗಾಂಧಿ ಅವರ ತತ್ವ, ಆದರ್ಶಗಳನ್ನು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುವುದೇ ನಾವು ಅವರಿಗೆ ಸಲ್ಲಿಸಬಹುದಾದ ಬಹುದೊಡ್ಡ ಶ್ರದ್ಧಾಂಜಲಿ ಎಂದರು.

ಬೆಂ.ಕೇಂದ್ರ ವಿವಿ ಕುಲಪತಿ ಪ್ರೊ.ಜಾಫೆಟ್ ಮಾತನಾಡಿ, ಅಹಿಂಸಾ ಮಾರ್ಗದಿಂದಲೇ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟ ಮಹಾತ್ಮ ಗಾಂಧೀಜಿಯವರ ಜೀವನ ಸಂದೇಶಗಳನ್ನು ಜೀವನದಲ್ಲಿ ಅಳವಡಿಸಿಕೊಂಡಾಗ ಮಾತ್ರ ನಾವು ಅವರಿಗೆ ನಿಜವಾದ ಗೌರವ ಸಲ್ಲಿಸಿದಂತಾಗುತ್ತದೆ ಎಂದರು.

ಗಾಂಧೀಜಿಯವರು ಅಹಿಂಸೆ, ಸತ್ಯಾಗ್ರಹ, ಅಸಹಕಾರದ ಮೂಲಕ ಬ್ರಿಟಿಷರಿಂದ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟವರು. ಜೀವನದ ಕೊನೆಯವರೆಗೆ ಸಚ್ಚಾರಿತ್ರ್ಯ ಮತ್ತು ನೈತಿಕ ಮೌಲ್ಯಗಳಿಗೆ ಬದ್ಧರಾಗಿದ್ದರು. ಇವರ ಆದರ್ಶಗಳನ್ನು ವಿದ್ಯಾರ್ಥಿಗಳು ರೂಢಿಸಿಕೊಳ್ಳಬೇಕು ದೇಶದ ಆಸ್ತಿಯಾಗಿರುವ ಯುವಕರು ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದವರ, ಪ್ರಾಣ ತ್ಯಾಗ ಅರ್ಪಿಸಿದ ಮಹನೀಯರ ಬಗ್ಗೆ ತಿಳಿದುಕೊಳ್ಳಬೇಕು ಇಂದಿನಿಂದಲೇ ಯುವಕರು ಆದರ್ಶಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಬೇಕೆಂದು ಸಲಹೆ ನೀಡಿದರು.



ಬೆಂ.ವಿವಿ ಪ್ರಾಧ್ಯಾಪಕಿ ಡಾ. ಮೀನಾಕುಮಾರಿ, ಮಾಜಿ ಅಡ್ವೊಕೇಟ್ ಜನರಲ್ ಪ್ರೊ. ರವಿವರ್ಮಕುಮಾರ್, ರಾಮಕೃಷ್ಣ ಇನ್‌ಸ್ಟಿಟ್ಯೂಟ್ ಆಫ್ ಮಾರಲ್ ಅಂಡ್ ಸ್ಪಿರಿಚುಯೆಲ್ ಎಜುಕೇಶನ್‌ನ ಶ್ರೀ ಶಾಂತಿವ್ರತಾನಂದಜೀ ಸ್ವಾಮೀಜಿ, ಗದಗ ವಿ.ವಿ ಪ್ರಾಧ್ಯಾಪಕ ಡಾ. ಜೀವನ್ ಕುಮಾರ್, ಪ್ರಾಂಶುಪಾಲರಾದ ಡಾ. ಅನುರಾಧಾ ರಾಯ್, ಗಾಂಧಿ ಅಧ್ಯಯನ ಕೇಂದ್ರದ ಸಂಚಾಲಕಿ ಅರ್ಚನಾ ತೇಜಸ್ವಿ ಮತ್ತಿತರರಿದ್ದರು.

ಪ್ರಜಾವಾಣಿ
ಬುಧವಾರ • ಆಗಸ್ಟ್ 29, 2018

# ‘ಯುವಜನತೆಗೆ ಒಳಧ್ವನಿಯೇ ಇಲ್ಲ’



ಬೆಂಗಳೂರು ಕೇಂದ್ರ ವಿಶ್ವವಿದ್ಯಾಲಯದ ಕುಲಪತಿ ಪ್ರೊ.ಜಾಫೆಟ್ ಅವರು ವಿದ್ಯಾರ್ಥಿಗಳೊಂದಿಗೆ ಮಾತುಕತೆ ನಡೆಸಿದರು. (ಎಡದಿಂದ) ಶೇಷಾದ್ರಿಪುರಂ ಕಾಲೇಜಿನ ಪ್ರಾಂಶುಪಾಲರಾದ ಡಾ.ಅನುರಾಧ ರಾಯ್, ಹಿರಿಯ ವಕೀಲ ಪ್ರೊ.ರವಿವರ್ಮ ಕುಮಾರ್ ಇದ್ದಾರೆ

ಬೆಂಗಳೂರು: ‘ಗಾಂಧಿಯನ್ನು ಗಡಿಯೊಳಗಿಟ್ಟು, ಗುಡಿ ಕಟ್ಟಿದ್ದೇವೆ. ಆದರೆ, ಎದೆಯಿಂದ ಹೊರಗಟ್ಟಿದ್ದೇವೆ’ ಎಂದು ಬೆಂಗಳೂರು ಕೇಂದ್ರ ವಿಶ್ವವಿದ್ಯಾಲಯದ ಕುಲಪತಿ ಪ್ರೊ. ಎಸ್.ಜಾಫೆಟ್ ವಿಷಾದ ವ್ಯಕ್ತಪಡಿಸಿದರು.

ನಗರದ ಶೇಷಾದ್ರಿಪುರಂ ಕಾಲೇಜು ಮಂಗಳವಾರ ಆಯೋಜಿಸಿದ್ದ ಬಾ- ಬಾಪು 150ನೇ ಜನ್ಮ ವರ್ಷಾಚರಣೆ ನಿಮಿತ್ತ ‘ಇಂದಿನ ಕಾಲಮಾನದಲ್ಲಿ ಗಾಂಧೀಜಿಯವರ ದೃಷ್ಟಿಕೋನ ಮತ್ತು ಚಿಂತನೆಗಳ ಪ್ರಸ್ತುತತೆ’ ಕುರಿತ ವಿದ್ಯಾರ್ಥಿ ಸಮ್ಮೇಳನ ಉದ್ಘಾಟಿಸಿ ಮಾತನಾಡಿದರು.

‘ಯುವಜನತೆಯಲ್ಲಿ ಒಳಧ್ವನಿಯೇ ಇಲ್ಲದಂತಾಗಿದೆ. ಇತರರನ್ನು ಕೇಳಿಸಿಕೊಳ್ಳುವ ಸಂಯಮ, ತಾಳ್ಮೆಯ ಕೊರತೆ ಇದೆ. ಬರಬರುತ್ತ ನೈತಿಕ ಸ್ಥಿರತೆಯನ್ನು ಕಳೆದುಕೊಳ್ಳುತ್ತಿದ್ದೇವೆ. ಹಾಗಾಗಿ ವಿದ್ಯಾರ್ಥಿಗಳ ವ್ಯಕ್ತಿತ್ವ ನಿರ್ಮಾಣಕ್ಕೆ ಗಾಂಧೀಜಿ, ಅಂಬೇಡ್ಕರ್ ಮತ್ತು ನೆಹರೂ ಅವರಂತಹ ಸಾಧಕರ ಕುರಿತು ಸಂವಹನ ನಡೆಸಬೇಕಿದೆ’ ಎಂದರು. ಕೇರಳ ಸೇರಿದಂತೆ ವಿವಿಧ ರಾಜ್ಯಗಳ 300ಕ್ಕೂ ಹೆಚ್ಚು ಕಾಲೇಜು ವಿದ್ಯಾರ್ಥಿಗಳು ಭಾಗವಹಿಸಿದ್ದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ವೂಡೇ ಪಿ.ಕೃಷ್ಣ ಅಧ್ಯಕ್ಷತೆ ವಹಿಸಿದ್ದರು.

12-8-16 ಪ್ರಜಾಪ್ರಗತಿ

# ಪ್ರಜ್ಞಾವಂತಿಕೆ ಬೆಳೆಸಿಕೊಳ್ಳಲು ವಿದ್ಯಾರ್ಥಿಗಳಿಗೆ ಕರೆ



ಶಿರಾ

ವಿದ್ಯಾರ್ಥಿಗಳ ಬದುಕನ್ನು ಹಸನುಗೊಳಿಸುವ ದಿವ್ಯಶಕ್ತಿಯು ಓರ್ವ ಶಿಕ್ಷಕನಲ್ಲಿದ್ದು ಆದರ್ಶ ಶಿಕ್ಷಕರನ್ನು ಅನುಕರಣೆ ಮಾಡುವ ಹಾಗೂ ಸಮಾಜದ ಒಳಿತನ್ನು ಬಯಸುವ ನಿಟ್ಟಿನಲ್ಲಿ ವಿದ್ಯಾರ್ಥಿಗಳು ಪ್ರಜ್ಞಾವಂತಿಕೆಯನ್ನು ಬೆಳೆಸಿಕೊಳ್ಳಬೇಕಿದೆ ಎಂದು ಶ್ರೀ ರಾಮಕೃಷ್ಣ ವಿವೇಕಾನಂದಾಶ್ರಮದ ಪೀಠಾಧ್ಯಕ್ಷ ಶ್ರೀ ವೀರೇಶಾನಂದ ಸರಸ್ವತಿಸ್ವಾಮೀಜಿ ತಿಳಿಸಿದರು.

ಶಿರಾ ನಗರದ ಬಾಲಕಿಯರ ಸರ್ಕಾರಿ ಪ.ಪೂ. ಕಾಲೇಜಿನಲ್ಲಿ ಶನಿವಾರ ಆಯೋಜಿಸಲಾಗಿದ್ದ ಅನುಭಾವದ ಅಣ್ಣ ಮಹೇಂದ್ರಣ್ಣ ಅನ್ನುವ ಅಭಿನಂದನಾ ಗ್ರಂಥವನ್ನು ಲೋಕಾರ್ಪಣೆಗೊಳಿಸಿ ವೀರೇಶಾನಂದ ಸರಸ್ವತಿ ಸ್ವಾಮೀಜಿ ಮಾತನಾಡಿದರು.

60 ವರ್ಷಗಳ ಯುವಕನಂತಿರುವ ನಿವೃತ್ತ ಪ್ರಾಂಶುಪಾಲ ಪಿ.ಹೆಚ್.ಮಹೇಂದ್ರಪ್ಪ ಅವರ ಸೇವೆ ಅತ್ಯಂತ ಗಣನೀಯವೂ ಆಗಿದೆ. ಓರ್ವ ಉಪನ್ಯಾಸಕ, ಪ್ರಾಂಶುಪಾಲರು, ಆಜನ್ಮ ಬ್ರಹ್ಮಚಾರಿಗಳೂ ಆಗಿರುವ ಮಹೇಂದ್ರಪ್ಪನವರ ಕೊಡುಗೆ ಶೈಕ್ಷಣಿಕ ಕ್ಷೇತ್ರಕ್ಕೆ ಸಾಕಷ್ಟಾಗಿದೆ. ಆದರ್ಶ ಶಿಕ್ಷಕರ ಪ್ರತಿರೂಪದ ವ್ಯಕ್ತಿಯಾಗಿ ಕಾಣುವ ಅವರನ್ನು ಕುರಿತ ಅಭಿನಂದನಾ ಗ್ರಂಥ ನಿಜಕ್ಕೂ ಅರ್ಥಪೂರ್ಣ ಎಂದರು.

ಯಾವತ್ತಿಗೂ ಪ್ರಪಂಚದಲ್ಲಿ ಕೆಟ್ಟದ್ದು ಹಾಗೂ ಒಳ್ಳೆಯದ್ದು ಇದ್ದೇ ಇರುತ್ತದೆ. ಕೆಟ್ಟದ್ದು ತಾನೇ ತಾನಾಗಿ ದೂರಗೊಳ್ಳುತ್ತಾ ಹೋಗುತ್ತದೆ. ಒಳ್ಳೆಯದ್ದನ್ನು ನಾವೇ ನಾವಾಗಿ ಹೆಕ್ಕಿಕೊಂಡು, ತಬ್ಬಿಕೊಂಡು ಮುನ್ನಡೆಯಬೇಕಿದೆ. ಇಂತಹ ತತ್ವದಡಿಯಲ್ಲಿ ಸಾಗಿದವರು ಮಾತ್ರ ಆದರ್ಶ ಶಿಕ್ಷಕರಾಗಲು ಸಾಧ್ಯ. ಜೀವನ ಎಂದೂ ಕೂಡ ನಿರರ್ಥಕವಲ್ಲ, ಅಪರೂಪಕ್ಕೆ ಲಭ್ಯವಾದ ಜೀವನವನ್ನು ಹಾಳುಗೆಡವಿಕೊಳ್ಳುವ ಸ್ವಯಂಕೃತ ಅಪರಾಧ ಯಾರೂ ಮಾಡಿಕೊಳ್ಳಬಾರದು. ಜೀವನದಲ್ಲಿ ನಾವು ಗಳಿಸಿದ್ದು ಸಾಧನೆಯಾಗಿ ಉಳಿಯಬೇಕು ಎಂದರು.

ಯಾವ ರೈತನು ಉತ್ತಮ ಬೆಳೆಯನ್ನು ಬೆಳೆಯುತ್ತಾನೋ ಅಂತಹ ರೈತನ ಹೊಲದಲ್ಲಿ ಆತನಿಗೆ ಅರಿವಿಲ್ಲದೆಯೇ ಫಲವತ್ತಾಗಿ ಕಳೆಯೂ ಬೆಳೆದಿರುತ್ತದೆ. ಬೆಳೆಯ ಕಡೆ ಹೆಚ್ಚು ಒಲವು ನೀಡುವಂತೆ ಕಳೆಯನ್ನು ತೆಗೆಯುವ ಕಡೆಯೂ ಅತಿ ಹೆಚ್ಚು ಒಲವು ನೀಡಿದಾಗ ಬೆಳೆದ ಬೆಳೆಗೆ ಉತ್ತಮ ಬೆಲೆ ಸಿಗಲು ಸಾಧ್ಯ. ಇಲ್ಲವಾದಲ್ಲಿ ಕಳೆಯು ರೈತನ ಬದುಕನ್ನು ಕೆಡಿಸಿಬಿಡುತ್ತದೆ ಅನ್ನುವ ಉದಾಹರಣೆ ನೀಡುವ ಮೂಲಕ ವೀರೇಶಾನಂದರು ಒಳಿತು-ಕೆಡುಕುಗಳ ಬಗ್ಗೆ ವಿದ್ಯಾರ್ಥಿಗಳಿಗೆ ಮನವರಿಕೆ ಮಾಡಿಕೊಟ್ಟರು.

ತಪ್ಪು ಮಾಡಿದ ಯಾವುದೇ ವ್ಯಕ್ತಿಯು ತನ್ನ ತಪ್ಪನ್ನು ತಿದ್ದಿಕೊಳ್ಳಲು ಅವಕಾಶವಿದೆ. ಗೃಹಸ್ಥರು ದೇವರ ಪ್ರೀತಿಗೆ ಪಾತ್ರರಾದರೆ, ಬ್ರಹ್ಮಚಾರಿಗಳು ನಂಬಿಕೆಗ ಪಾತ್ರರಾಗುತ್ತಾರೆ. ಬ್ರಹ್ಮಚರ್ಯದ ಜೊತೆಗೆ ಶಿಕ್ಷಣ ತಜ್ಞರೂ ಆಗಿ ಮಕ್ಕಳ ಶೈಕ್ಷಣಿಕ ಬದುಕನ್ನು ಹಸನು ಮಾಡಿದ ಮಹೇಂದ್ರಪ್ಪನವರು ಮುಂದೆಯೂ ತಮ್ಮ ಶಿಕ್ಷಣದ ಸೇವೆಯನ್ನು ಮುಂದುವರಿಸಬೇಕಿದೆ ಎಂದರು.

ಆಧ್ಯಾತ್ಮವನ್ನು ಹೇಳಿಕೊಡಲು ಸನ್ಯಾಸಿಯೇ ದಿಕ್ಸೂಚಿಯಾಗಿ ನಿಲ್ಲಬೇಕಿದೆ. ಗೃಹಿಣಿಯಾದವಳಿಗೆ ಮನೆ, ಅರ್ಚಕನಿಗೆ ಗುಡಿ, ಶಿಕ್ಷಕನಿಗೆ ಶಾಲೆ, ಸನ್ಯಾಸಿಗೆ ಮಠ ಅನ್ನುವುದು ಯಾವತ್ತಿಗೂ ಸತ್ಯ. ಸನ್ಯಾಸಿಯಾದವನು ಸರಸ್ವತಿಯಾಗಬೇಕು. ಸನ್ಯಾಸಿಯ ನಾಲಿಗೆಯಲ್ಲಿ ಸರಸ್ವತಿಯು ನಲಿದಾಡಿದಾಗ ವಿದ್ಯಾರ್ಥಿಗಳ ಹಾಗೂ ಸಾರ್ವಜನಿಕರ ಬದುಕು ಹಸನಾಗಲು ಸಾಧ್ಯ. ಸಂಸ್ಕಾರ ವಂಚಿತರಾಗಿ ಯಾರೂ ಕೂಡ ಬದುಕಬಾರದು ಎಂದು ವೀರೇಶಾನಂದ ಸರಸ್ವತಿಸ್ವಾಮೀಜಿ ಹೇಳಿದರು.

ಮಾಜಿ ಸಚಿವ ಟಿ.ಬಿ.ಜಯಚಂದ್ರ ಕಾರ್ಯಕ್ರಮಕ್ಕೆ ಚಾಲನೆ ನೀಡಿ ಮಾತನಾಡಿ, ಶರೀರ, ಮನಸ್ಸು ಹಾಗೂ ಆತ್ಮವನ್ನು ಗೆಲ್ಲುವ ಶಕ್ತಿ ಇದ್ದವರು ಮಾತ್ರ ಜನರ ಮನಸ್ಸನ್ನು ಗೆಲ್ಲಲು ಸಾಧ್ಯ. ಆ ಕೆಲಸವನ್ನು ಮಹೇಂದ್ರಪ್ಪ ಪ್ರಾಮಾಣಿಕವಾಗಿ ಮಾಡಿದ್ದಾರೆ. ನಿಜವಾದ ಗುರುವಿನ ಲಕ್ಷಣ ಅವರಲ್ಲಿದೆ. ತ್ರಿಮೂರ್ತಿಗಳನ್ನು ಮೀರಿದವರು ಮಾತ್ರ ನಿಜವಾದ ಗುರು ಅನ್ನಿಸಿಕೊಳ್ಳಲು ಸಾಧ್ಯ ಎಂದರು.

ಭಾರತ ಬೆಳಗಲು ರಾಮಕೃಷ್ಣ ಪರಮಹಂಸರು, ವಿವೇಕಾನಂದರು ಸೇರಿದಂತೆ ಅನೇಕ ದಿವ್ಯ ಜ್ಞಾನಿಗಳ ಆದರ್ಶಗಳೇ ಕಾರಣ. ಆಧ್ಯಾತ್ಮಕ್ಕೆ ಮೂಲ ವೇದ ಮತ್ತು ಉಪನಿಷತ್ತುಗಳು. ಇಂದು ಶಿಕ್ಷಣ ಅನ್ನುವುದು ವ್ಯಾಪಾರೀಕರಣವಾಗುತ್ತಿರುವ ಹೊತ್ತಿನಲ್ಲಿ ಅಪರೂಕ್ಕೆಂಬಂತೆ ಮಹೇಂದ್ರಪ್ಪನಂತಹ ಶಿಕ್ಷಕರು ನಮ್ಮಲ್ಲಿರುವುದು ಹೆಮ್ಮೆಯ ಸಂಗತಿ ಎಂದು ಜಯಚಂದ್ರ ಹೇಳಿದರು.

ಡಾ.ನಂದೀಶ್ವರ್ ಅವರ ಸಂಪಾದಕತ್ವದ ಅನುಭಾವದ ಅಣ್ಣ ಮಹೇಂದ್ರಣ್ಣ ಅಭಿನಂದನಾ ಗ್ರಂಥವನ್ನು ಕುರಿತು ಪ್ರೊಫೆ. ಪಿ.ಕೃಷ್ಣ ಮಾತನಾಡಿ ಆಧ್ಯಾತ್ಮದ ಲೇಪನ ಶಿಕ್ಷಣಕ್ಕೆ ಅತ್ಯಗತ್ಯವಾಗಿದೆ. ಓರ್ವ ಉಪನ್ಯಾಸಕರಾಗಿ ಅದರೊಟ್ಟಿಗೆ ಆಧ್ಯಾತ್ಮದ ಬಗ್ಗೆಯೂ ಅಪಾರ ವಿಚಾರ ತಿಳಿದಿರುವ ಮಹೇಂದ್ರಪ್ಪ ಓರ್ವ ಲೇಖಕರೂ ಹೌದು. ಮಹೇಂದ್ರಪ್ಪ ಅವರ ಕುರಿತ ಉತ್ತಮ ಲೇಖನಗಳು ಈ ಹೊತ್ತಿಗೆಯಲ್ಲಿ ಮೇಳೈಸಿಕೊಂಡಿವೆ. ಸೇವೆ ಹಾಗೂ ತ್ಯಾಗಗಳು ರಾಷ್ಟ್ರೀಯ ಸೇವೆಗಳಿದ್ದಂತೆ. ಅಂತಹ ಸೇವಾ ಕೈಂಕರ್ಯಗಳನ್ನು ಕೈಗೊಳ್ಳುವುದು ಎಲ್ಲರ ಕರ್ತವ್ಯವಾಗಬೇಕು ಎಂದರು.

ನಗರಸಭೆಯ ಅಧ್ಯಕ್ಷ ಅಮಾನು ಲ್ಲಾ ಖಾನ್; ಪ್ರೊ.ಕೆ.ಹನುಮಂತರಾಯಪ್ಪ, ಅಶೋಕ್‌ಕುಮಾರ್, ಎ.ಆರ್.ಶ್ರೀನಿವಾಸಯ್ಯ, ಪ್ರಾಂಶುಪಾಲ ಬಿ.ಪಿ.ಪಾಂಡುರಂಗಯ್ಯ, ಬಿ.ಎಂ.ಲಕ್ಷ್ಮೀಶ್, ವಕೀಲರಾದ ಗುರುಮೂರ್ತಿ, ಕೃಷ್ಣಪ್ಪ, ಲೋಕನಾಥ್, ಬಿ.ಕೆ.ಕಲಾ, ಎ.ಪಿ.ಎಂ.ಸಿ. ಅಧ್ಯಕ್ಷ ಸತ್ಯನಾರಾಯಣ್, ಡಾ.ಕೆ.ರಾಮಕೃಷ್ಣ, ಮ.ಲ.ನ.ಮೂರ್ತಿ, ಡಾ.ಡಿ.ಎಂ.ಗೌಡ, ಎಸ್.ಎನ್.ಕೃಷ್ಣಯ್ಯ ಸೇರಿದಂತೆ ಅನೇಕ ಪ್ರಮುಖರು ಹಾಜರಿದ್ದರು. ಡಾ.ನಂದೀಶ್ವರ್ ಸ್ವಾಗತಿಸಿ, ಚಿದಾನಂದ್ ವಂದಿಸಿದರು.

### ಮುಖ್ಯಾಂಶಗಳು

- ಸಿರಾದಲ್ಲಿ ಅಭಿನಂದನಾ ಗ್ರಂಥ ಬಿಡುಗಡೆ
- ಪಿ.ಹೆಚ್.ಮಹೇಂದ್ರಪ್ಪ ಕುರಿತ ಅಭಿನಂದನಾ ಗ್ರಂಥ
- ಶ್ರೀ ವೀರೇಶಾನಂದ ಸರಸ್ವತಿಸ್ವಾಮೀಜಿಗಳಿಂದ ಲೋಕಾರ್ಪಣೆ
- ಮಾಜಿ ಸಚಿವ ಜಯಚಂದ್ರ ಕಾರ್ಯಕ್ರಮದಲ್ಲಿ ಭಾಗಿ

ತುಮಕೂರು ವಾರ್ತೆ KAR KAN/2002/07363 Rs. 2/- Post Regn-No. L2/RNP-363/TMR/2018-2020

12-8-16

## ಶಿರಾದಲ್ಲಿ ಅನುಭಾವದ ಅಣ್ಣ ಮಹೇಂದ್ರಣ್ಣ ಕೃತಿ ಲೋಕಾರ್ಪಣೆ

# ಮನುಷ್ಯ ವಿವೇಕಾನಂತನಾಗಲಿ: ವೀರೇಶಾನಂದಶ್ರೀ



ಆಚಾರ ವಿಚಾರ ಶುದ್ಧವಾಗಿದ್ದು ನಿಂದನೆ ಸಹಿಸುವ ಶಕ್ತಿ ಇರುವವರು ಮಾತ್ರ ಯಶಸ್ಸು ಗಳಿಸುತ್ತಾರೆ. ಅಂಥ ಗುಣಗಳು ಮಹೇಂದ್ರಪ್ಪರಲ್ಲಿವೆ, ಕಾಯಕ ಸತ್ಯ ಮತ್ತು ಮೌಲ್ಯಕ್ಕೆ ಒತ್ತು ನೀಡಿ ರಚನೆಗೊಂಡಿರುವ ಗ್ರಂಥದ ಸಂಪಾದಕ ನಂದೀಶ್ವರರೂ ಅಭಿನಂದನಾರ್ಹರು ಎಂದರು.

**ಶಿರಾ:** ರೈತನೊಬ್ಬ ಉತ್ತಮ ಬೆಳೆ ಬೆಳೆದಾಗಿಯೂ ಅದರ ನಡುವೆ ಕಳೆ ಕೂಡಾ ಬೆಳೆದಿರುತ್ತದೆ. ಆದರೆ ಕಳೆ ಹೊರತು ಪಡಿಸಿ ಬೆಳೆ ಸಂಗ್ರಹಿಸುವ ರೈತನಂತೆ, ಯಾವ ವ್ಯಕ್ತಿ ಬೆಳೆಯುವ ಕಡೆ ಗಮನ ನೀಡುತ್ತಾನೋ, ಆತ ಜೀವನದಲ್ಲಿ ಎದುರಾಗುವ ಕಳೆಗಳಿಂದ ವಿಚಲಿತನಾಗುವುದಿಲ್ಲ. ಅದಕ್ಕೆ ಮಹೇಂದ್ರಪ್ಪ ಅವರ ಸಾಧನೆಯೇ ಜ್ವಲಂತ ಸಾಕ್ಷಿ ಎಂದು ತುಮಕೂರು ರಾಮಕೃಷ್ಣಾಶ್ರಮದ ವೀರೇಶಾನಂದ ಸ್ವಾಮೀಜಿ ನುಡಿದರು.

ಶನಿವಾರ ಇಲ್ಲಿನ ಬಾಲಕಿಯರ ಸರ್ಕಾರಿ ಪದವಿಪೂರ್ವ ಕಾಲೇಜು ಆವರಣದಲ್ಲಿ ನಡೆದ ನಿವೃತ್ತ ಪ್ರಾಂಶುಪಾಲ ಪಿ.ಎಚ್.ಮಹೇಂದ್ರಪ್ಪ ಕುರಿತ ಅನುಭಾವದ ಅಣ್ಣ ಮಹೇಂದ್ರಣ್ಣ ಎನ್ನುವ ಅಭಿನಂದನಾ ಗ್ರಂಥ ಲೋಕಾರ್ಪಣೆಗೊಳಿಸಿ ಮಾತಾನಾಡಿ, ಪ್ರಪಂಚದಲ್ಲಿ ಒಳ್ಳೆಯದು ಹಾಗೂ ಕೆಟ್ಟದ್ದು ಎರಡೂ ಇರುತ್ತದೆ. ನಾವು ಸಮಾಜದಲ್ಲಿ ಒಳ್ಳೆಯದಕ್ಕೆ ಗೊಬ್ಬರ ಹಾಕಿ ಬೆಳೆಸಿದರೆ, ಕೆಟ್ಟದ್ದು ತಾನಾಗಿಯೇ ನಶಿಸುತ್ತದೆ. ಪ್ರಪಂಚದ ಯಾವುದೇ ಕ್ಷೇತ್ರವೂ ಶುಭ್ರ ಅಥವಾ ಸ್ವಚ್ಛವಾಗಿಲ್ಲ, ಅದು ಸಕ್ಕರೆ-ಮರಳಿನ ಮಿಶ್ರಣದಂತೆ ಇದೆ, ಹಾಗೆಂದ ಮಾತ್ರಕ್ಕೆ ನಾವು ಭ್ರಮನಿರಸರಾಗಬೇಕಿಲ್ಲ, ಮನುಷ್ಯ ರಾದ ನಾವು ಇರುವೆಯ ವಿವೇಕ ಹಾಗೂ ಪ್ರಜ್ಞೆ ಇಟ್ಟುಕೊಂಡರೆ ಸಕ್ಕರೆಯನ್ನು ಮಾತ್ರ ಕಚ್ಚಿಕೊಳ್ಳಬಹುದು ಎಂದು ಅವರು ಮಾರ್ಮಿಕವಾಗಿ ನುಡಿದರು.

ಜೀವನ ಪ್ರದರ್ಶನಕ್ಕೆ ಅಲ್ಲ ಅದು ಒಂದು ನಿದರ್ಶನ, ಪ್ರಪಂಚದಲ್ಲಿ ಸಂತ ಮಹಾತ್ಮರಿಗೆ ಹಿಂದಿನ ಜನ್ಮದ ಸಂಸ್ಕಾರ ಇರುವುದನ್ನು ನೀನು ನಂಬುವುದೇ ಆದರೆ, ಜಗತ್ತಿನಲ್ಲಿ ತಪ್ಪು ಮಡುವ ವ್ಯಕ್ತಿಗೂ ಕೂಡ ತಿದ್ದಿಕೊಳ್ಳುವ ಅವಕಾಶವಿದೆ ಎಂಬ ವಿವೇಕಾನಂದರ ವಾಣಿಯನ್ನೂ ಸ್ಮರಿಸಬೇಕು ಎಂದರು.

ಮಹೇಂದ್ರಪ್ಪ ಮತ್ತು ನಂದೀಶ್ವರ ಅವರ ಜೋಡಿಯನ್ನು ಶಿವಲಿಂಗ ಮತ್ತು ನಂದಿಗೆ ಹೋಲಿಸಿದ ಅವರು ನಂದೀಶ್ವರ ಅವರು ಗ್ರಂಥಕ್ಕೆ ಅಪೂರ್ವವಾದ ಸ್ವರೂಪ ನೀಡಿದ್ದಾರೆ ಎಂದು ಶ್ಲಾಘಿಸಿದರು.

ಮಾಜಿ ಸಚಿವ ಟಿ.ಬಿ.ಜಯಚಂದ್ರ ಮಾತನಾಡಿ, ಶರೀರ, ಮನಸ್ಸು ಹಾಗೂ ಆತ್ಮವನ್ನು ಗೆಲ್ಲುವಲ್ಲಿ ಯಶಸ್ವಿಯಾಗಿ ಸಮಾಜ ಸೇವೆಗೆ ತನ್ನ ಜೀವನವನ್ನೇ ಮುಡುಪಾಗಿಟ್ಟ ಮಹಾನ್ ತ್ಯಾಗಿ. ನಮ್ಮ ಮಹೇಂದ್ರಪ್ಪ. ಮನುಷ್ಯರನ್ನು ಮನುಷ್ಯರನ್ನಾಗಿ ಪರಿವರ್ತಿಸುವ ಕಾರ್ಯದಲ್ಲಿ ಇವರ ಪಾತ್ರ ಅತ್ಯಮೂಲ್ಯವಾದದ್ದು. ದೇಶ ಧರ್ಮ ಹಾಗೂ ಗುರು ಪರಂಪರೆಯಲ್ಲಿ ಅಭಿಮಾನ ಬೆಳೆದರೆ ಮಾತ್ರ ಶಿಕ್ಷಣಕ್ಕೆ ಸಾರ್ಥಕತೆ ಸಿಗುತ್ತದೆ ಎಂದರು.

ಪುಸ್ತಕದ ಕುರಿತು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಮಾತನಾಡಿ ಆಚಾರ ವಿಚಾರ ಶುದ್ಧವಾಗಿದ್ದು ನಿಂದನೆ ಸಹಿಸುವ ಶಕ್ತಿ ಇರುವವರು ಮಾತ್ರ ಯಶಸ್ಸು ಗಳಿಸುತ್ತಾರೆ. ಅಂಥ ಗುಣಗಳು ಮಹೇಂದ್ರಪ್ಪರಲ್ಲಿವೆ, ಕಾಯಕ ಸತ್ಯ ಮತ್ತು ಮೌಲ್ಯಕ್ಕೆ ಒತ್ತು ನೀಡಿ ರಚನೆಗೊಂಡಿರುವ ಗ್ರಂಥದ ಸಂಪಾದಕ ನಂದೀಶ್ವರರೂ ಅಭಿನಂದನಾರ್ಹರು ಎಂದರು.

ಬಿಡುಗಡೆಗೊಂಡ ಪುಸ್ತಕದ ನಾಯಕ ಮಹೇಂದ್ರಪ್ಪ ಮಾತನಾಡಿ ತಮ್ಮೆಲ್ಲಾ ಯಶಸ್ಸಿನ ಹಿಂದೆ ಮಾಜಿ ಸಚಿವ ಜಯಚಂದ್ರ ಅವರ ಸಹಕಾರ, ಪ್ರೇರಣೆ ಇದೆ. ಆಧ್ಯಾತ್ಮಿಕ ಮಹಾ ಗುರುವಾದ ವೀರೇಶಾನಂದರು ಗ್ರಂಥ ಲೋಕಾರ್ಪಣೆ ಮಾಡಿ ನನಗೆ ಅನುಭಾವದ ಶಕ್ತಿ ತುಂಬಿರುತ್ತಾರೆ. ಇಂದು ಬಿಡುಗಡೆಯಾದ ಕೃತಿ ನನ್ನಲ್ಲಿ ಎಲ್ಲರಿಗಿಂತ ನಾನು ದೊಡ್ಡವನು ಎನ್ನುವ ಅಹಂಕಾರ, ವಿಕಾರಭಾವಗಳು ತುಂಬದಿರಲಿ ಎಂದು ದೇವರಲ್ಲಿ ಪ್ರಾರ್ಥಿಸುವುದಾಗಿ ತಿಳಿಸಿದರು.

ನಗರಸಭೆ ಅಧ್ಯಕ್ಷ ಅಮಾನುಲ್ಲಾ ಖಾನ್, ಪ.ಪೂ ಶಿಕ್ಷಣ ಇಲಾಖೆ ಉಪನಿರ್ದೇಶಕ ಅಶೋಕ್ ಕುಮಾರ್, ಬಿ.ಪಿ.ಪಾಂಡುರಂಗಪ್ಪ, ಪ್ರೊ.ಕೆ.ಹನುಮಂತರಾಯಪ್ಪ, ವೈದ್ಯ ಡಾ.ಡಿ.ಎಂ.ಗೌಡ, ಎಸ್.ಎನ್.ಕೃಷ್ಣಯ್ಯ, ಎ.ಆರ್.ಶ್ರೀನಿವಾಸಯ್ಯ, ಬಿ.ಎಂ.ಲಕ್ಷ್ಮೀಶ್, ಲೋಕನಾಥ್, ಆಂಜನೇಯ, ಡಾ.ರಾಮಕೃಷ್ಣ, ಮಲನ ಮೂರ್ತಿ, ಚಿಕ್ಕಣ್ಣ, ಡಿ.ಎಸ್.ಕೃಷ್ಣಮೂರ್ತಿ, ಸತ್ಯನಾರಾಯಣ, ಗುರುಮೂರ್ತಿ, ವೈ.ನರೇಶ್ ಬಾಬು, ಡಾ. ಎನ್.ನಂದೀಶ್ವರ, ಕೆ.ಎಸ್.ಚಿದಾನಂದ, ಬ್ರಹ್ಮಕುಮಾರಿಯರಾದ ಕಲಾ, ಪುಷ್ಪ, ಉಷಾ ಮೊದಲಾದವರು ಇದ್ದರು.



ಉದಯಕಾಲ

ಬುಧವಾರ, ಸೆಪ್ಟೆಂಬರ್ 05, 2018

ಕೊಡಗಿನ ನೆರೆ ಹಾವಳಿಯಲ್ಲಿ ಸಿಲುಕಿದ ಸಂತ್ರಸ್ತರಿಗೆ ನೆರವಾಗಲು ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ವತಿಯಿಂದ 10 ಲಕ್ಷ ರೂ. ಚೆಕ್‌ನ್ನು ಮುಖ್ಯಮಂತ್ರಿ ಪರಿಹಾರ ನಿಧಿಗೆ ನೀಡಿದರು. ಈ ವೇಳೆ ಸಂಸ್ಥೆ ಅಧ್ಯಕ್ಷ ಎನ್.ಆರ್ ಪಂಡಿತಾರಾಧ್ಯ, ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೆ ಪಿ. ಕೃಷ್ಣಾ, ಟಿ.ಎಸ್ ಹೆಂಜ್ರಪ್ಪ, ಅನಿಲ್‌ಕುಮಾರ್, ಪಾರ್ಥಸಾರಥಿ, ಶೇಷನಾರಾಯಣ ಇದ್ದರು.

ಸಂಯುಕ್ತ ಕರ್ನಾಟಕ

5 ಸೆಪ್ಟಂಬರ್ 2018 ಬುಧವಾರ



ಶೇಷಾದ್ರಿಪುರ ಎಜುಕೇಷನ್ ಟ್ರಸ್ಟ್ ವತಿಯಿಂದ ಕೊಡಗು ಸಂತ್ರಸ್ತರಿಗಾಗಿ ಮುಖ್ಯಮಂತ್ರಿಗಳ ಪರಿಹಾರ ನಿಧಿಗೆ ಹತ್ತು ಲಕ್ಷ ರೂ. ಚೆಕ್‌ನ್ನು ಮುಖ್ಯಮಂತ್ರಿ ಎಚ್.ಡಿ. ಕುಮಾರಸ್ವಾಮಿ ಅವರಿಗೆ ನೀಡಿದರು. ಟ್ರಸ್ಟ್ ಅಧ್ಯಕ್ಷ ಪಂಡಿತಾರಾಧ್ಯ, ಡಾ. ವೂಡೇ ಪಿ. ಕೃಷ್ಣ, ಟಿ.ಎಸ್. ಹಂಪರಪ್ಪ, ಅನಿಲಕುಮಾರ ಇದ್ದರು.

09 ಆಗಸ್ಟ್ 2018 ಗುರುವಾರ

9-8-18

## ಅಭಿನಂದನಾ ಗ್ರಂಥ ಲೋಕಾರ್ಪಣೆ ಸಮಾರಂಭ

ಶಿರಾ



ಪ್ರಜಾಪಿತ ಬ್ರಹ್ಮಕುಮಾರಿ ಈಶ್ವರೀಯ ವಿಶ್ವ ವಿದ್ಯಾಲಯದ ಸಾಧಕರು, ಶಿಕ್ಷಣ ತಜ್ಞರು, ಸಮಾಜ ಸೇವಕರು, ನಿವೃತ್ತ ಪ್ರಾಂಶುಪಾಲರೂ ಆದ ಪಿ.ಹೆಚ್.ಮಹೇಂದ್ರಪ್ಪ ಅವರ ಕುರಿತ ಅನುಭಾವದ ಅಣ್ಣಾ ಮಹೇಂದ್ರಣ್ಣ ಅಭಿನಂಧನಾ ಗ್ರಂಥದ ಲೋಕಾರ್ಪಣಾ ಸಮಾರಂಭವು ಆ:11 ರಂದು ಶಿರಾ ನಗರದಲ್ಲಿ ನಡೆಯಲಿದೆ.

ಅಂದು ಬೆಳಿಗ್ಗೆ 10.30ಕ್ಕೆ ನಗರದ ಬಾಲಕಿಯರ ಸರ್ಕಾರಿ ಪ.ಪೂ. ಕಾಲೇಜಿನ ಆವರಣದಲ್ಲಿ ನಡೆಯುವ ಸಮಾರಂಭದಲ್ಲಿ ಶ್ರೀ ವೀರೇಶಾನಂದ ಸರಸ್ವತಿಸ್ವಾಮೀಜಿಗಳು ಗ್ರಂಥವನ್ನು ಲೋಕಾರ್ಪಣೆ ಮಾಡಿ ಮಾತನಾಡುವರು.

ಶಾಸಕ ಬಿ.ಸತ್ಯನಾರಾಯಣ್ ಅಧ್ಯಕ್ಷತೆ ವಹಿಸಲಿದ್ದು ಮಾಜಿ ಸಚಿವ ಟಿ.ಬಿ.ಜಯಚಂದ್ರ ಕಾರ್ಯಕ್ರಮದ ಅಧ್ಯಕ್ಷತೆ ವಹಿಸುವರು. ಡಾ||ವೂಡೇ ಪಿ.ಕೃಷ್ಣ ಕೃತಿ ಕುರಿತು ಮಾತನಾಡುವರು. ಮುಖ್ಯ ಅತಿಥಿಗಳಾಗಿ ಪ್ರಾಂಶುಪಾಲ ಪಿ.ಹೆಚ್.ಮಹೇಂದ್ರಪ್ಪ ಗಣ್ಯ ಉಪಸ್ಥಿತರಿರುವರು.

### ಅಲ್ಲಲ್ಲಿ ಏನೇನು?

ಶಿರಾ

ಪೂರ್ಣಚಂದ್ರ ತೇಜಸ್ವಿ ಪ್ರಕಾಶನ: ಅನುಭಾವದ ಅಣ್ಣ ಮಹೇಂದ್ರಣ್ಣ ಅಭಿನಂದನಾ ಗ್ರಂಥ ಲೋಕಾರ್ಪಣೆ ಸಮಾರಂಭ. ಅಧ್ಯಕ್ಷತೆ- ಬಿ.ಸತ್ಯನಾರಾಯಣ. ಉದ್ಘಾಟನೆ- ಟಿ.ಬಿ.ಜಯಚಂದ್ರ, ಕೃತಿ ಲೋಕಾರ್ಪಣೆ- ಸ್ವಾಮಿ ವೀರೇಶಾನಂದ ಸರಸ್ವತಿ. ಅತಿಥಿಗಳು- ಡಾ.ವೂಡೇ ಪಿ.ಕೃಷ್ಣ, ಬಿ.ಪಿ.ಪಾಂಡುರಂಗಪ್ಪ, ಪಿ.ಎಚ್. ಮಹೇಂದ್ರಪ್ಪ. ಸ್ಥಳ- ಬಾಲಕಿಯರ ಸರ್ಕಾರಿ ಪದವಿ ಪೂರ್ವ ಕಾಲೇಜು. ಬೆಳಿಗ್ಗೆ 10.30.

ಾ ಓದಿರಿ

8-18

## 11ರಂದು ಅಭಿನಂದನಾ ಗ್ರಂಥ ಬಿಡುಗಡೆ

ಶಿರಾ: ಪೂರ್ಣಚಂದ್ರ ತೇಜಸ್ವಿ ಪ್ರಕಾಶನದ ವತಿಯಿಂದ ನಿವೃತ್ತ ಪ್ರಾಂಶುಪಾಲ, ಶಿಕ್ಷಣ ತಜ್ಞ ಪಿ.ಎಚ್. ಮಹೇಂದ್ರಪ್ಪ ಅವರ ಕುರಿತ ಅನುಭಾವದ ಅಣ್ಣ ಮಹೇಂದ್ರಣ್ಣ ಅಭಿನಂದನಾಗ್ರಂಥ ಲೋಕಾರ್ಪಣೆ ಸಮಾರಂಭ ಆ. 11ರ ಶನಿವಾರ ಬೆಳಿಗ್ಗೆ ಬಾಲಕಿಯರ ಸರ್ಕಾರಿ ಪಪೂ ಕಾಲೇಜಿನಲ್ಲಿ ಹಮ್ಮಿಕೊಳ್ಳಲಾಗಿದೆ ಎಂದು ಕಸಾಪ ಅಧ್ಯಕ್ಷ ಡಾ. ನಂದೀಶ್ವರ್ ತಿಳಿಸಿದ್ದಾರೆ. ಅನುಭಾವದ ಅಣ್ಣ ಮಹೇಂದ್ರಣ್ಣ ಅಭಿನಂದನಾ ಗ್ರಂಥವನ್ನು ತುಮಕೂರಿನ ರಾಮಕೃಷ್ಣ ವಿವೇಕಾನಂದ ಆಶ್ರಮದ ಅಧ್ಯಕ್ಷ ಡಾ. ವೀರೇಶಾನಂದ ಸರಸ್ವತಿ ಲೋಕಾರ್ಪಣೆಗೊಳಿಸುವರು. ಅಧ್ಯಕ್ಷತೆಯನ್ನು ಶಾಸಕ ಬಿ. ಸತ್ಯನಾರಾಯಣ ವಹಿಸುವರು. ಮಾಜಿ ಸಚಿವ ಟಿ.ಬಿ.ಜಯಚಂದ್ರ ಉದ್ಘಾಟಿಸುವರು. ಕೃತಿ ಕುರಿತು ಬೆಂಗಳೂರು ಶೇಷಾದ್ರಿಪುರಂ ಕಾಲೇಜಿನ ಗೌರವ ಕಾರ್ಯದರ್ಶಿ ಡಾ. ವೂಡೇ. ಪಿ. ಕೃಷ್ಣ ಮಾತನಾಡುವರು. ಮುಖ್ಯ ಅತಿಥಿಗಳಾಗಿ ಕಾಲೇಜಿನ ಪ್ರಾಂಶುಪಾಲ ಬಿ.ಪಿ. ಪಾಂಡುರಂಗಯ್ಯ, ನಿವೃತ್ತ ಪ್ರಾಂಶುಪಾಲ ಮಹೇಂದ್ರಪ್ಪ ಉಪಸ್ಥಿತರಿರುವರು.

3-8-18

## 11ರಂದು ಗ್ರಂಥ ಲೋಕಾರ್ಪಣೆ ಸಮಾರಂಭ

ತುಮಕೂರು: ಶಿಕ್ಷಣ ತಜ್ಞ ಪಿ.ಎಚ್. ಮಹೇಂದ್ರಪ್ಪ ಅವರ ಕುರಿತ 'ಅನುಭಾವದ ಅಣ್ಣ ಮಹೇಂದ್ರಣ್ಣ' ಅಭಿನಂದನಾ ಗ್ರಂಥ ಲೋಕಾರ್ಪಣೆ ಸಮಾರಂಭವನ್ನು ಇದೇ ಆಗಸ್ಟ್ 11 ರಂದು ಬೆಳಿಗ್ಗೆ 10.30ಕ್ಕೆ ಶಿರಾ ತಾಲ್ಲೂಕಿನ ಬಾಲಕಿಯರ ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ಹಮ್ಮಿಕೊಳ್ಳಲಾಗಿದೆ.

ಶಾಸಕ ಬಿ.ಸತ್ಯನಾರಾಯಣ ಅಧ್ಯಕ್ಷತೆ ವಹಿಸುವರು. ಮಾಜಿ ಕಾನೂನು ಸಚಿವ ಟಿ.ಬಿ.ಜಯಚಂದ್ರ ಉದ್ಘಾಟನೆ ಮಾಡಲಿದ್ದಾರೆ. ತುಮಕೂರು ರಾಮಕೃಷ್ಣ ವಿವೇಕಾನಂದ ಆಶ್ರಮದ ಅಧ್ಯಕ್ಷ ಸ್ವಾಮಿ ವೀರೇಶಾನಂದ ಸರಸ್ವತಿ ಅವರು ಕೃತಿ ಲೋಕಾರ್ಪಣೆ ಮಾಡುವರು. ಬೆಂಗಳೂರು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಅವರು ಕೃತಿ ಕುರಿತು ಮಾತನಾಡಲಿದ್ದಾರೆ. ಬಿ.ಪಿ. ಪಾಂಡುರಂಗಪ್ಪ ಭಾಗವಹಿಸಲಿದ್ದಾರೆ.

ಹರಿಹಾಯ್ದ ಜಿಲ್ಲಾ ಪಂಚಾಯಿತಿ ಉಪಾಧ್ಯಕ್ಷೆ ಶಾರದಾ

ಲೋಕಲ್

## ಗ್ರಂಥ ಲೋಕಾರ್ಪಣೆ ನಾಳೆ

■ ವಿಜಯವಾಣಿ ಸುದ್ದಿಜಾಲ ಶಿರಾ

ಬಾಲಕಿಯರ ಸರ್ಕಾರಿ ಪದವಿಪೂರ್ವ ಕಾಲೇಜು ಆವರಣದಲ್ಲಿ ಆ.11ರ ಬೆಳಗ್ಗೆ 10.30ಕ್ಕೆ ತಾಲೂಕು ಕಸಾಪ ಅಧ್ಯಕ್ಷ ನಂದೀಶ್ವರ್ ಅವರ 'ಅನುಭಾವದ ಅಣ್ಣ ಮಹೇಂದ್ರಣ್ಣ' ಅಭಿನಂದನಾ ಗ್ರಂಥ ಲೋಕಾರ್ಪಣೆಗೊಳ್ಳಲಿದೆ. ಶಾಸಕ ಬಿ.ಸತ್ಯನಾರಾಯಣ್ ಅಧ್ಯಕ್ಷತೆ ವಹಿಸುವರು. ಮಾಜಿ ಸಚಿವ ಟಿ.ಬಿ.ಜಯಚಂದ್ರ ಉದ್ಘಾಟಿಸುವರು. ತುಮಕೂರು ಶ್ರೀ ರಾಮಕೃಷ್ಣ ವಿವೇಕಾನಂದ ಆಶ್ರಮದ ಡಾ.ವೀರೇಶಾನಂದ ಸರಸ್ವತೀ ಸ್ವಾಮೀಜಿ ಕೃತಿ ಲೋಕಾರ್ಪಣೆಗೊಳಿಸಿ ಆಶೀರ್ವಚನ ನೀಡುವರು. ಪ್ರಾಂಶುಪಾಲ ಬಿ.ಪಿ.ಪಾಂಡುರಂಗಪ್ಪ, ನಗರಸಭೆ ಅಧ್ಯಕ್ಷ ಅಮಾನುಲ್ಲಾಖಾನ್, ಪ್ರೆಸಿಡೆನ್ಸಿ ಶಾಲೆ ಸಂಸ್ಥಾಪಕ ಅಧ್ಯಕ್ಷ ಚಿದಾನಂದ್ ಎಂ.ಗೌಡ, ತಾಲೂಕು ಪಂಚಾಯಿತಿ ಅಧ್ಯಕ್ಷೆ ಹಂಸವೇಣಿ ಶ್ರೀನಿವಾಸ್, ಕಾಲೇಜು ಅಭಿವೃದ್ಧಿ ಸಮಿತಿ ಸದಸ್ಯ ಪ್ರೊ.ಕೆ.ಹನುಮಂತರಾಯಪ್ಪ, ಪದವಿಪೂರ್ವ ಶಿಕ್ಷಣ ಇಲಾಖೆ ಉಪನಿರ್ದೇಶಕ ಅಶೋಕ್ ಕುಮಾರ್, ಜಿಪಂ ಸದಸ್ಯ ಎಸ್.ರಾಮಕೃಷ್ಣ, ಸಮಾಜ ಸೇವಕ ಕಲ್ಕೆರೆ ರವಿಕುಮಾರ್ ಅತಿಥಿಗಳಾಗಿ ಪಾಲ್ಗೊಳ್ಳುವರು.



### ಹೆಣ್ಣುಮಕ್ಕಳ ಶಿಕ್ಷಣ ಅರಿವು ಮೂಡಿಸಿದ್ದ ಮಹೇಂದ್ರಪ್ಪ

ಶಿರಾ ತಾಲೂಕಿನ ಪಂಜಿಗಾನಹಳ್ಳಿ ಹನುಮಂತಪ್ಪ-ಲಕ್ಷ್ಮಮ್ಮ ದಂಪತಿಯ 7 ಮಕ್ಕಳ ಪೈಕಿ ನಾಲ್ಕನೆಯವರಾಗಿ 1957ನೇ ಜು.29ರಂದು ಜನಿಸಿದ ಪಿ.ಎಚ್.ಮಹೇಂದ್ರಪ್ಪ ಉಪನ್ಯಾಸಕರಾಗಿ, ಬಾಲಕಿಯರ ಸರ್ಕಾರಿ ಪದವಿಪೂರ್ವ ಕಾಲೇಜು ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸಿದ್ದರು. ಹೆಣ್ಣುಮಕ್ಕಳ ಶಿಕ್ಷಣ ಕುರಿತು ಅರಿವು ಮೂಡಿಸಿದವರಲ್ಲಿ ಪ್ರಮುಖರು. ಇವರ ಕುರಿತು ಗ್ರಂಥವೇ 'ಅನುಭಾವದ ಅಣ್ಣ ಮಹೇಂದ್ರಣ್ಣ'.

## 11ರಂದು ಅಭಿನಂದನಾ ಗ್ರಂಥ ಬಿಡುಗಡೆ



ಶಿರಾ: ಪೂರ್ಣಚಂದ್ರ ತೇಜಸ್ವಿ ಪ್ರಕಾಶನ ವತಿಯಿಂದ ನಿವೃತ್ತ ಪ್ರಾಂಶುಪಾಲ, ಶಿಕ್ಷಣ ತಜ್ಞ ಪಿ.ಎಚ್. ಮಹೇಂದ್ರಪ್ಪ ಅವರ ಕುರಿತ ಅನುಭಾವದ ಅಣ್ಣ ಮಹೇಂದ್ರಣ್ಣ ಅಭಿನಂದನಾ ಗ್ರಂಥ ಲೋಕಾರ್ಪಣೆ ಸಮಾರಂಭ ಆ.11 ಶನಿವಾರ ಬೆಳಗ್ಗೆ 10-30 ಕ್ಕೆ ಬಾಲಕಿಯರ ಸರಕಾರಿ ಪಪೂ ಕಾಲೇಜನಲ್ಲಿ ಹಮ್ಮಿಕೊಳ್ಳಲಾಗಿದೆ ಎಂದು ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಡಾ.ನಂದೀಶ್ವರ್ ತಿಳಿಸಿದ್ದಾರೆ.

ಗ್ರಂಥವನ್ನು ತುಮಕೂರು ರಾಮಕೃಷ್ಣ ವಿವೇಕಾನಂದ ಆಶ್ರಮದ ಅಧ್ಯಕ್ಷರಾದ ಡಾ. ವೀರೇಶಾನಂದ ಸರಸ್ವತಿ ಉದ್ಘಾಟಿಸಲಿದ್ದು, ಅಧ್ಯಕ್ಷತೆಯನ್ನು ಶಾಸಕ ಬಿ.ಸತ್ಯನಾರಾಯಣ ವಹಿಸುವರು. ಮಾಜಿ ಸಚಿವ ಟಿ.ಬಿ. ಜಯಚಂದ್ರ ಉದ್ಘಾಟಿಸಲಿದ್ದು ಕೃತಿ ಕುರಿತು ಬೆಂಗಳೂರು ಶೇಷಾದ್ರಿಪುರಂ ಕಾಲೇಜಿನ ಗೌರವ ಕಾರ್ಯದರ್ಶಿ ಡಾ. ವೂಡೇ.ಪಿ. ಕೃಷ್ಣ ಮಾತನಾಡುವರು. ಮುಖ್ಯ ಅತಿಥಿಗಳಾಗಿ ಕಾಲೇಜಿನ ಪ್ರಾಂಶುಪಾಲ ಬಿ.ಪಿ. ಪಾಂಡುರಂಗಯ್ಯ, ನಿವೃತ್ತ ಪ್ರಾಂಶುಪಾಲ ಪಿ. ಎಚ್. ಮಹೇಂದ್ರಪ್ಪ ಉಪಸ್ಥಿತರಿರುವರು.

# ಗಾಂಧಿ ಸಂದೇಶ ಭಾಷಣಕ್ಕೆ ಸೀಮಿತ : ಜಾಫೆಟ್

ಉದಯಕಾಲ ನ್ಯೂಸ್

ಬೆಂಗಳೂರು: ದೇಶಕ್ಕೆ ಸ್ವಾತಂತ್ರ್ಯ ತರುವಲ್ಲಿ ಮಹತ್ತರ ಪಾತ್ರವಹಿಸಿದ ಮಹಾತ್ಮ ಗಾಂಧಿ ಅವರ ಜೀವನ ಆದರ್ಶ ಕೇವಲ ಭಾಷಣಕ್ಕೆ ಸೀಮಿತವಾಗಿದೆ ಎಂದು ಬೆಂಗಳೂರು ಕೇಂದ್ರ ವಿವಿ ಕುಲಪತಿ ಪ್ರೊ. ಜಾಫೆಟ್ ಕಳವಳ ವ್ಯಕ್ತಪಡಿಸಿದರು.

ಶೇಷಾದ್ರಿಪುರಂ ಕಾಲೇಜು ಸಭಾಂಗಣದಲ್ಲಿ ಬಾಪು 150ನೇ ಜನುಮ ವರ್ಷಾಚರಣೆ ಅಂಗವಾಗಿ ಆಯೋಜಿಸಿದ್ದ ರಾಜ್ಯ ಮಟ್ಟದ ವಿದ್ಯಾರ್ಥಿ ಸಮ್ಮೇಳನ ಉದ್ಘಾಟಿಸಿ ಅವರು ಮಾತನಾಡಿದರು.

ಮಹಾತ್ಮ ಗಾಂಧೀಜಿಯವರ ಜೀವನ ಸಂದೇಶಗಳನ್ನು ಭಾಷಣಕ್ಕೆ ಮಾತ್ರ ಸೀಮಿತಗೊಳಿಸದೇ ಜೀವನದಲ್ಲಿ ಅಳವಡಿಸಿಕೊಂಡಾಗ ಮಾತ್ರ ನಾವು ಅವರಿಗೆ ನಿಜವಾದ ಗೌರವ ಸಲ್ಲಿಸಿದಂತಾಗುತ್ತದೆ ಎಂದು ಅಭಿಪ್ರಾಯಪಟ್ಟರು.

ಗಾಂಧೀಜಿಯವರು ಅಹಿಂಸೆ, ಸತ್ಯಾಗ್ರಹ, ಅಸಹಕಾರದ ಮೂಲಕ ಬ್ರಿಟಿಷರಿಂದ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟವರು. ಜೀವನದ ಕೊನೆಯವರೆಗೆ ಸಚ್ಚಾರಿತ್ರ್ಯ ಮತ್ತು ನೈತಿಕ ಮೌಲ್ಯಗಳಿಗೆ ಬದ್ಧರಾಗಿದ್ದರು. ಅವರ ಆದರ್ಶಗಳನ್ನು ವಿದ್ಯಾರ್ಥಿಗಳು ರೂಢಿಸಿಕೊಳ್ಳಬೇಕು ಎಂದರು.

ದೇಶದ ಆಸ್ತಿಯಾಗಿರುವ ಯುವಕರು ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದವರ, ಪ್ರಾಣ ತ್ಯಾಗ ಅರ್ಪಿಸಿದ ಮಹನೀಯರ ಬಗ್ಗೆ ತಿಳಿದುಕೊಳ್ಳಬೇಕು. ಇಂದಿನಿಂದಲೇ ಯುವಕರು ಆದರ್ಶಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಬೇಕು ಎಂದು ಸಲಹೆ ನೀಡಿದರು.



ಗಾಂಧೀಜಿ ಹಾಗೂ ಲಾಲ್ ಬಹದ್ದೂರ್ ಶಾಸ್ತ್ರಿ ಅವರಂತಹ ಮಹಾನ್ ವ್ಯಕ್ತಿಗಳು ಜನಿಸದೇ ಇದ್ದರೆ ದೇಶಕ್ಕೆ ಸ್ವಾತಂತ್ರ್ಯ ವೆಂಬುದು ಕನಸಾಗುವ ಸಾಧ್ಯತೆ ಇತ್ತು. ದೇಶಕ್ಕಾಗಿ ತಮ್ಮನ್ನು ಸಂಪೂರ್ಣ ಅರ್ಪಿಸಿಕೊಂಡಿದ್ದರಿಂದಲೇ ಬ್ರಿಟಿಷರ ದಾಸ್ಯದಿಂದ ಭಾರತವನ್ನು ಮುಕ್ತವಾಗಿಸಲು ಸಾಧ್ಯವಾಯಿತು ಎಂದು ಅಭಿಪ್ರಾಯಪಟ್ಟರು.

ಈ ವೇಳೆ ಕರ್ನಾಟಕ ಗಾಂಧಿ ಸ್ಮಾರಕ ನಿಧಿ [illegible] ಅಧ್ಯಕ್ಷ ಡಾ. [illegible] ಮಾತನಾಡಿ, ಭಗವದ್ಗೀತೆ, ಕುರಾನ್ ಹಾಗೂ ಬೈಬಲ್ ಹೇಗೆ ಧರ್ಮಗಳಿಗೆ ಗ್ರಂಥವಾಗಿಯೋ ಅದೇ ರೀತಿ ಸಂವಿಧಾನವೂ ಪ್ರತಿಯೊಬ್ಬ ಭಾರತೀಯನ ಗ್ರಂಥವಾಗಿದೆ. ಗಾಂಧೀಜಿ ಅವರು ದೇಶಕ್ಕೆ ನೀಡಿರುವ ಕೊಡುಗೆಯ ಬಗ್ಗೆ ಇಂದಿನ ಯುವ ಪೀಳಿಗೆ ಅರಿವು ಮೂಡಿಸಬೇಕಿದೆ. ಗಾಂಧಿ ಅವರ ತತ್ವ, ಆದರ್ಶಗಳನ್ನು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುವುದೇ ನಾವು ಅವರಿಗೆ ಸಲ್ಲಿಸಬಹುದಾದ ಬಹು ದೊಡ್ಡ ಶ್ರದ್ಧಾಂಜಲಿ ಎಂದು ಹೇಳಿದರು.

ಈ ಸಂಜೆ

ಮಂಗಳವಾರ 28-08-2018



ಶೇಷಾದ್ರಿಪುರಂ ಕಾಲೇಜಿನಲ್ಲಿಂದು ಹಮ್ಮಿಕೊಂಡಿದ್ದ ಇಂದಿನ ಕಾಲಮಾನದಲ್ಲಿ ಗಾಂಧೀಜಿಯವರ ದೃಷ್ಟಿಕೋನ ಮತ್ತು ಚಿಂತನೆಗಳ ಪ್ರಸ್ತುತತೆ ಕುರಿತ ವಿಚಾರಸಂಕಿರಣವನ್ನು ಬೆಂಗಳೂರು ಕೇಂದ್ರ ವಿವಿ ಕುಲಪತಿ ಪ್ರೊ. ಎಸ್. ಜಾಫೆಟ್ ಉದ್ಘಾಟಿಸಿದರು. ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೆ ಪಿ. ಕೃಷ್ಣ, ಗಾಂಧಿ ಅಧ್ಯಯನ ಕೇಂದ್ರದ ಸಂಚಾಲಕರಾದ ಅರ್ಚನಾ ತೇಜಸ್ವಿ, ಪ್ರಾಂಶುಪಾಲರಾದ ಡಾ. ಅನುರಾಧಾ ರಾಯ್ ಮತ್ತಿತರರಿದ್ದರು.

ಸಂಜೆ ವಾಣಿ ಮಂಗಳವಾರ 28 ಆಗಸ್ಟ್ 2018

# ಗಾಂಧೀಜಿ ಭಾಷಣಕ್ಕೆ ಮಾತ್ರ ಸೀಮಿತವಾಗದಿರಲಿ



ಬೆಂಗಳೂರು, ಆ.28– ಮಹಾತ್ಮ ಗಾಂಧೀಜಿಯವರ ಜೀವನ ಸಂದೇಶಗಳನ್ನು ಭಾಷಣಕ್ಕೆ ಮಾತ್ರ ಸೀಮಿತಗೊಳಿಸದೇ ಜೀವನದಲ್ಲಿ ಅಳವಡಿಸಿಕೊಂಡಾಗ ಮಾತ್ರ ನಾವು ಅವರಿಗೆ ನಿಜವಾದ ಗೌರವ ಸಲ್ಲಿಸಿದಂತಾಗುತ್ತದೆ ಎಂದು ಬೆಂಗಳೂರು ಕೇಂದ್ರ ವಿವಿ ಕುಲಪತಿ ಪ್ರೊ.ಜಾಫೆಟ್ ಹೇಳಿದರು.

ನಗರದಲ್ಲಿಂದು ಶೇಷಾದ್ರಿ ಪುರಂ ಕಾಲೇಜು ಸಭಾಂಗಣದಲ್ಲಿ ಬಾ ಬಾಪು 150ನೇ ಜನುಮ ವರ್ಷಾಚಾರಣೆ ಅಂಗವಾಗಿ ಆಯೋಜಿಸಿದ್ದ, ರಾಷ್ಟ್ರ ಮಟ್ಟದ ವಿದ್ಯಾರ್ಥಿ ಸಮ್ಮೇಳನ ಉದ್ಘಾಟಿಸಿ ಅವರು ಮಾತನಾಡಿದರು.

ಗಾಂಧಿಧೀಜಿಯವರು ಅಹಿಂಸೆ, ಸತ್ಯಾಗ್ರಹ, ಅಸಹಕಾರದ ಮೂಲಕ ಬ್ರಿಟೀಷರಿಂದ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟವರು. ಜೀವನದ ಕೊನೆಯ ವರೆಗೆ ಸಚ್ಚಾರಿತ್ರ್ಯ ಮತ್ತು ನೈತಿಕ ಮೌಲ್ಯಗಳಿಗೆ ಬದ್ಧರಾಗಿದ್ದರು. ಇವರ ಆದರ್ಶಗಳನ್ನು ವಿದ್ಯಾರ್ಥಿಗಳು ರೂಢಿಸಿಕೊಳ್ಳಬೇಕು ಎಂದರು.

ದೇಶದ ಆಸ್ತಿಯಾಗಿರುವ ಯುವಕರು ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದವರ, ಪ್ರಾಣ ತ್ಯಾಗ ಅರ್ಪಿಸಿದ ಮಹನೀಯರ, ಬಗ್ಗೆ ತಿಳಿದುಕೊಳ್ಳಬೇಕು ಇಂದಿನಿಂದಲೇ. ಯುವಕರು ಆದರ್ಶಗಳನ್ನು ಜೀವನದಲ್ಲಿ ಅಳವಡಿಸಿ ಕೊಳ್ಳಲು ಪ್ರಯತ್ನಿಸಬೇಕು' ಎಂದು ಸಲಹೆ ನೀಡಿದರು.

ಗಾಂಧೀಜಿ ಹಾಗೂ ?ಲಾಲ್ ಬಹದ್ದೂರ್ ಶಾಸ್ತ್ರಿ ಅವರಂತಹ ಮಹಾನ್ ವ್ಯಕ್ತಿಗಳು ಜನಿಸದೇ ಇದ್ದರೆ ದೇಶಕ್ಕೆ ಸ್ವಾತಂತ್ರ್ಯವೆಂಬುದು ಕನಸಾಗುವ ಸಾಧ್ಯತೆ ಇತ್ತು. ದೇಶಕ್ಕಾಗಿ ತಮ್ಮನ್ನು ಸಂಪೂರ್ಣ ಅರ್ಪಿಸಿಕೊಂಡಿ ದ್ದರಿಂದಲೇ ಬ್ರಿಟಿಷರ ದಾಸ್ಯದಿಂದ ಭಾರತವನ್ನು ಮುಕ್ತವಾಗಿಸಲು ಸಾಧ್ಯವಾಯಿತು' ಎಂದು ಅಭಿಪ್ರಾಯಪಟ್ಟರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷಡಾ. ವೂಡೇ ಪಿ. ಕೃಷ್ಣ ಮಾತನಾಡಿ, ಭಗವದ್ಗೀತೆ, ಕುರಾನ್ ಹಾಗೂ ಬೈಬಲ್ ಹೇಗೆ, ಧರ್ಮಗಳಿಗೆ ಗ್ರಂಥವಾಗಿಯೂ; ಅದೇ ರೀತಿ; ಸಂವಿಧಾನವೂ ಪ್ರತಿಯೊಬ್ಬ ಭಾರತೀಯನ ಗ್ರಂಥವಾಗಿದೆ ಎಂದು ನುಡಿದರು.

'ಗಾಂಧಿಯವರು ಕೊಡುಗೆ ಕುರಿತು ಯುವ ಪೀಳೀಗೆ ತಿಳಿದುಕೊಳ್ಳಬೇಕು ಎಂ ಅವರು, ಗಾಂಧಿ ಅವರ ತತ್ವ, ಆದರ್ಶಗಳನ್ನು ನಮ್ಮ ಜೀವನದಲ್ಲಿ ಅಳವಡಿಸಿ ಕೊಳ್ಳುವುದೇ ನಾವು ಅವರಿಗೆ ಸಲ್ಲಿಸಬಹುದಾದ ಬಹು ದೊಡ್ಡ ಶ್ರದ್ಧಾಂಜಲಿ ಎಂದು ಹೇಳಿದರು.

## ವಿಜಯ ಕರ್ನಾಟಕ

ಮಂಗಳವಾರ, 28 ಆಗಸ್ಟ್ 2018

**ಶೇಷಾದ್ರಿಪುರ ಕಾಲೇಜು:** ಬಾ – ಬಾಪು 150ನೇ ಜನುಮ ಸಮಾಚರಣ. 'ಇಂದಿನ ಕಾಲಮಾನದಲ್ಲಿ ಗಾಂಧೀಜಿ ಚಿಂತನೆ ಮತ್ತು ದೃಷ್ಟಿಕೋನದ ಪ್ರಸ್ತುತತೆ' ವಿಷಯ ಕುರಿತು ರಾಷ್ಟ್ರಮಟ್ಟದ ವಿದ್ಯಾರ್ಥಿಗಳ ಸಮ್ಮೇಳನ. ಉದ್ಘಾಟನೆ: ಬೆಂ ಕೇಂದ್ರ ವಿವಿ ಕುಲಪತಿ ಪ್ರೊ. ಎಸ್. ಜಾಫೆಟ್. ಸ್ಥಳ: ಸಮ್ಮೇಳನ ಸಭಾಂಗಣ, ಶೇಷಾದ್ರಿಪುರ ಕಾಲೇಜು. 9.00

## ಪ್ರಜಾವಾಣಿ

ಮಂಗಳವಾರ • ಆಗಸ್ಟ್ 28, 2018

### ನಗರದಲ್ಲಿ ಇಂದು

'ಪ್ರಸ್ತುತ ಸಂದರ್ಭದಲ್ಲಿ ಗಾಂಧಿಯವರ ಚಿಂತನೆ ಮತ್ತು ದೃಷ್ಟಿಕೋನದ ಪ್ರಸ್ತುತತೆ' ಕುರಿತು ರಾಷ್ಟ್ರೀಯ ವಿಚಾರ ಸಂಕಿರಣ: ಉದ್ಘಾಟನೆ– ಎಸ್. ಜಾಫೆಟ್, ಅಧ್ಯಕ್ಷತೆ– ವೂಡೇ ಪಿ.ಕೃಷ್ಣ, 'ಗಾಂಧೀಜಿ ಇಂದು' ಕುರಿತು ಸಂವಾದದಲ್ಲಿ– ರವಿವರ್ಮ ಕುಮಾರ್, [illegible] ದೇಶಪಾಂಡೆ, ಆಯೋಜನೆ– ಗಾಂಧಿ ಅಧ್ಯಯನ ಕೇಂದ್ರ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಸ್ಥಳ– ಸಭಾಂಗಣ, ಶೇಷಾದ್ರಿಪುರಂ, ಬೆಳಿಗ್ಗೆ 9

## ಕನ್ನಡಪ್ರಭ

ಮಂಗಳವಾರ 28.8.2018

[illegible]

## 2 DECCAN HERALD

Tuesday, August 28, 2018

**GENERAL**

**Sheshadripuram College:** National Conference on 'The Relevance of the Thoughts and Vision of Gandhiji in our Times', Sheshadripuram College, Nagappa Street, Sheshadripuram, 9 am.

ವಿಜಯ ಕರ್ನಾಟಕ ಸೋಮವಾರ,13 ಆಗಸ್ಟ್ 2018

# ಪ್ರತ್ಯೇಕ ಕೂಗು ಸರಿಯಲ್ಲ

■ ವಿಕ ಸುದ್ದಿಲೋಕ ಬೆಂಗಳೂರು

ಅಖಂಡ ಕರ್ನಾಟಕ ಸುಭದ್ರ, ಸಮಗ್ರ ಕರ್ನಾಟಕವಾಗಬೇಕು. ಅದನ್ನು ಬಿಟ್ಟು ಪ್ರತ್ಯೇಕ ಕರ್ನಾಟಕದ ಹೋರಾಟ ಸರಿಯಲ್ಲ ಎಂದು ಸುಪ್ರೀಂಕೋರ್ಟ್‌ನ ನಿವೃತ್ತ ನ್ಯಾಯಮೂರ್ತಿ ಶಿವರಾಜ ಪಾಟೀಲ್ ಅಭಿಪ್ರಾಯಪಟ್ಟರು.

**ನಿ. ನ್ಯಾ. ಶಿವರಾಜ ಪಾಟೀಲ್ ಅಭಿಮತ**

ಸಮರ್ಥ ಸಾಹಿತ್ಯ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನ ಭಾನುವಾರ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಹಮ್ಮಿಕೊಂಡಿದ್ದ ಸ್ವಾತಂತ್ರ್ಯ ಸಂಭ್ರಮಾಚರಣೆ ಮತ್ತು 'ಕೆಂಗಲ್ ಹನುಮಂತಯ್ಯ' ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಅವರು ಮಾತನಾಡಿದರು.

"ಅಭಿವೃದ್ಧಿಯಲ್ಲಿ ಹಿಂದುಳಿದಿರುವ ಉತ್ತರ ಕರ್ನಾಟಕವನ್ನು ಅಭಿವೃದ್ಧಿಪಡಿಸಿ ಎತ್ತರ ಕರ್ನಾಟಕ ಮಾಡಬೇಕು. ಸರಕಾರ ಅದನ್ನು ಬಾಯಿಮಾತಿನಲ್ಲಿ ಹೇಳದೆ, ಅಭಿವೃದ್ಧಿ ಕಾರ್ಯಗಳನ್ನು ಕೈಗೆತ್ತಿಕೊಳ್ಳಬೇಕು. ಅದಕ್ಕೆ ಜನರ ಸಹಕಾರವೂ ಅಷ್ಟೇ ಮುಖ್ಯ," ಎಂದರು.

ಆಧ್ಯಾತ್ಮ ಚಿಂತಕ ಪಾವಗಡ ಪ್ರಕಾಶ್ ರಾವ್ ಮಾತನಾಡಿ, "ಪುಲಿಕೇಶಿಯ ಕಾಲದಲ್ಲಿ ಕಾವೇರಿಯಿಂದ ಗೋದಾವರಿವರೆಗೂ ಕರ್ನಾಟಕ ರಾಜ್ಯ ವಿಸ್ತರಿಸಿತ್ತು. ಬ್ರಿಟಿಷರ ಕಾಲದಲ್ಲಿ ಕರ್ನಾಟಕದ ಕೆಲ ಭಾಗಗಳು ಕಳಚಿದವು. ಅಖಂಡ ಕರ್ನಾಟಕ ಸುಖಾಸುಮ್ಮನೇ ಬಂದಿದ್ದಲ್ಲ, ಈ ಪ್ರದೇಶಗಳನ್ನು ಒಗ್ಗೂಡಿಸಲು ನೂರು ವರ್ಷ ಚಳವಳಿ ನಡೆಸಬೇಕಾಯಿತು," ಎಂದು ಹೇಳಿದರು.

ಡಾ.ಕಾಮಿನಿರಾವ್, ಸಾಹಿತಿ ಕಂಬ್ಳಾಣ ಶರಣಪ್ಪ, ಪತ್ರಕರ್ತರಾದ ಚನ್ನೇಗೌಡ, ಆರ್.ಚೇತನ್ ಸೇರಿದಂತೆ 35 ಮಂದಿ ಸಾಧಕರಿಗೆ 'ಕೆಂಗಲ್ ಹನುಮಂತಯ್ಯ' ಪ್ರಶಸ್ತಿ ನೀಡಿ ಗೌರವಿಸಲಾಯಿತು. ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಮೈಸೂರು ಸಿಲ್ಕ್ ಕ್ಲಾತ್ ಮರ್ಚೆಂಟ್ಸ್ ಕೋ ಆಪರೇಟಿವ್ ಬ್ಯಾಂಕ್‌ನ ಉಪಾಧ್ಯಕ್ಷ ಆರ್.ಪಿ.ರವಿಶಂಕರ್, ಪ್ರತಿಷ್ಠಾನದ ಅಧ್ಯಕ್ಷ ರಾ.ವಿಜಯ ಸಮರ್ಥ ಮತ್ತಿತರರಿದ್ದರು.



ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಭಾನುವಾರ ಹಮ್ಮಿಕೊಂಡಿದ್ದ ಸ್ವಾತಂತ್ರ್ಯ ಸಂಭ್ರಮಾಚರಣೆ ಕಾರ್ಯಕ್ರಮದಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ ಗಣ್ಯರಿಗೆ 'ಕೆಂಗಲ್ ಹನುಮಂತಯ್ಯ' ರಾಜ್ಯ ಪ್ರಶಸ್ತಿ ಪ್ರದಾನ ಮಾಡಲಾಯಿತು.

ಸಂಯುಕ್ತ ಕರ್ನಾಟಕ
ಸೋಮವಾರ 13 । ಆಗಸ್ಟ್ । 2018

# ಕನ್ನಡವೇ ಸತ್ಯ ಕನ್ನಡವೇ ನಿತ್ಯ



• ಕನ್ನಡ ಸಾಹಿತ್ಯ ಪರಿಷತ್ತಿನ ಶ್ರೀಕೃಷ್ಣರಾಜ ಪರಿಷನ್ಮಂದಿರ ಸಭಾಂಗಣದಲ್ಲಿ ಸಮರ್ಥ ಸಾಹಿತ್ಯ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನ ವತಿಯಿಂದ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಡಾ.ಕಾಮಿನಿ ರಾವ್, ಕಂಚ್ಯಾಣಿ ಶರಣಪ್ಪ, ಆರ್.ಚೇತನ್, ನಾಗರಾಜ್ ಗುಪ್ತಾ ಸೇರಿದಂತೆ 35 ಜನರಿಗೆ ಕೆಂಗಲ್ ಹನುಮಂತಯ್ಯ ರಾಜ್ಯ ಪ್ರಶಸ್ತಿ ಪ್ರದಾನ ಮಾಡಲಾಯಿತು. ಆರ್.ಪಿ.ರವಿಶಂಕರ್, ಪಾವಗಡ ಪ್ರಕಾಶ್ ರಾವ್, ಡಾ.ವೂಡೇ ಪಿ.ಕೃಷ್ಣ ಮತ್ತಿತರರಿದ್ದರು.

ಕನ್ನಡಪ್ರಭ

ಸೋಮವಾರ 13.8.2018

# ಪಾಶ್ಚಾತ್ಯ ಪ್ರಭಾವದಿಂದ ಭಾಷೆ, ಗುರಿ, ಆಹಾರ ಬದಲು

## ಆಧ್ಯಾತ್ಮ ಚಿಂತಕ ಪಾವಗಡ ಪ್ರಕಾಶ್ ರಾವ್ ತೀವ್ರ ಬೇಸರ | ವಿವಿಧ ಕ್ಷೇತ್ರದ ಸಾಧಕರಿಗೆ ಕೆಂಗಲ್ ಹನುಮಂತಯ್ಯ ಪ್ರಶಸ್ತಿ ವಿತರಣೆ

**ಬೆಂಗಳೂರು:** ಪಾಶ್ಚಾತ್ಯರ ಪ್ರಭಾವದಿಂದ ಇಂದು ದೇಶದ ಜನರ ಚಿಂತನೆ, ಗುರಿ, ಭಾಷೆ, ಆಹಾರ ಎಲ್ಲವೂ ಬದಲಾಗಿದೆ ಎಂದು ಆಧ್ಯಾತ್ಮ ಚಿಂತಕ ಪಾವಗಡ ಪ್ರಕಾಶ್ ರಾವ್ ಹೇಳಿದರು.

ಸಮರ್ಥ ಸಾಹಿತ್ಯ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನ ಭಾನುವಾರ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಆಯೋಜಿಸಿದ್ದ ಸ್ವಾತಂತ್ರ್ಯ ಸಂಭ್ರಮಾಚರಣೆ ಮತ್ತು ಕೆಂಗಲ್ ಹನುಮಂತಯ್ಯ ರಾಜ್ಯ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಮಾತನಾಡಿದ ಅವರು, ಸಹಸ್ರಾರು ಜನರ ಬಲಿದಾನದಿಂದ ದೇಶಕ್ಕೆ ಸ್ವಾತಂತ್ರ್ಯ ಬಂದಿದೆ. ಆದರೆ, ನಮಗೆ ಸ್ವಾತಂತ್ರ್ಯದ ಬೆಲೆ ತಿಳಿದಿಲ್ಲ. ಪಾಶ್ಚಾತ್ಯ ದೇಶಗಳ ಪ್ರಭಾವಕ್ಕೆ ತುತ್ತಾಗಿ ಬದಲಾಗುತ್ತಿದ್ದೇವೆ. ಅನಾಥಾಶ್ರಮ, ವೃದ್ಧಾಶ್ರಮ, ವಿವಾಹ ವಿಚ್ಛೇದನ ಇವೆಲ್ಲವೂ ಪಾಶ್ಚಾತ್ಯರ ಪ್ರಭಾವದಿಂದ ಬಂದಿವೆ ಎಂದು ಬೇಸರ ವ್ಯಕ್ತಪಡಿಸಿದರು. ಇಂದಿನ ಯುವಕರು ಭಾರತದ ಮಣ್ಣಿನಲ್ಲಿ ಹುಟ್ಟಿ ಇಲ್ಲಿನ ಗಾಳಿ, ಬೆಳಕಿನಲ್ಲಿ ಬೆಳೆದು ಹಣದ ಆಮಿಷಕ್ಕೆ ಬಲಿಯಾಗಿ ಉದ್ಯೋಗ ಅರಸಿ ವಿದೇಶಗಳಿಗೆ ತೆರಳುತ್ತಿದ್ದಾರೆ ಎಂದರು.



ಸಮರ್ಥ ಸಾಹಿತ್ಯ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನ ಕಸಾಪದಲ್ಲಿ ಆಯೋಜಿಸಿದ್ದ ಸಮಾರಂಭದಲ್ಲಿ ಸಾಧಕರಿಗೆ ಕೆಂಗಲ್ ಹನುಮಂತಯ್ಯ ಪ್ರಶಸ್ತಿ ಪ್ರದಾನ ಮಾಡಲಾಯಿತು.

ಇದೇ ವೇಳೆ ಡಾ. ಕಾಮಿನಿ ರಾವ್, ಸಾಹಿತಿ ಕಂಬ್ಯಾಣ ಶರಣಪ್ಪ, ಪತ್ರಕರ್ತರಾದ ಆರ್. ಚೇತನ್, ಚನ್ನೇಗೌಡ ಸೇರಿದಂತೆ 35 ಮಂದಿಗೆ ಕೆಂಗಲ್ ಹನುಮಂತಯ್ಯ ರಾಜ್ಯ ಪ್ರಶಸ್ತಿ ಪ್ರದಾನ ಮಾಡಲಾಯಿತು.

ಸುಪ್ರೀಂ ಕೋರ್ಟ್ ನಿವೃತ್ತ ನ್ಯಾಯಮೂರ್ತಿ ಶಿವರಾಜ ಪಾಟೀಲ್, ಮೈಸೂರು ಸಿಲ್ಕ್ ಕ್ಲಾತ್ ಮರ್ಚೆಂಟ್ ಕೋ ಆಪರೇಟಿವ್ ಬ್ಯಾಂಕ್ ಉಪಾಧ್ಯಕ್ಷ ಆರ್.ಪಿ. ರವಿಶಂಕರ್, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ

ಸೋಮವಾರ 13 ಆಗಸ್ಟ್ 2018
VIJAYAVANI » 13 AUGUST 2018

# ಸ್ವಾತಂತ್ರ್ಯ ಹೋರಾಟದ ಹಿಂದಿನ ಬಲಿದಾನ ಅರಿಯುವಲ್ಲಿ ವಿಫಲ

## ಹಿರಿಯ ವಿದ್ವಾಂಸ ಪಾವಗಡ ಪ್ರಕಾಶ್ ರಾವ್ ಬೇಸರ » 35 ಸಾಧಕರಿಗೆ ಕೆಂಗಲ್ ಹನುಮಂತಯ್ಯ ಪ್ರಶಸ್ತಿ ಪ್ರದಾನ

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಸ್ವಾತಂತ್ರ್ಯ ಹೋರಾಟದ ಹಿಂದೆ ಸಹಸ್ರಾರು ಮಂದಿಯ ಬಲಿದಾನವಿದೆ. ಆದರೆ, ಇದರ ಪ್ರತಿಫಲ ಅನುಭವಿಸುತ್ತಿರುವ ನಾವು ಸ್ವಾತಂತ್ರ್ಯದ ಮಹತ್ವ ಅರಿತುಕೊಳ್ಳುವಲ್ಲಿ ವಿಫಲರಾಗಿದ್ದೇವೆ ಎಂದು ಹಿರಿಯ ವಿದ್ವಾಂಸ ಪಾವಗಡ ಪ್ರಕಾಶರಾವ್ ಬೇಸರ ವ್ಯಕ್ತಪಡಿಸಿದ್ದಾರೆ.

ಸಮರ್ಥ ಸಾಹಿತ್ಯ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಭಾನುವಾರ ಹಮ್ಮಿಕೊಂಡಿದ್ದ ಸ್ವಾತಂತ್ರ್ಯ ಸಂಭ್ರಮಾಚರಣೆ ಹಾಗೂ ಕೆಂಗಲ್ ಹನುಮಂತಯ್ಯ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಮಾತನಾಡಿದರು.

ಸ್ವಾತಂತ್ರ್ಯ ಹೋರಾಟದಲ್ಲಿ ಕೈಜೋಡಿಸಿದವರಿಗೆ ಬೆಳಗ್ಗೆ ಮನೆಯಿಂದ ಹೊರಟರೆ ರಾತ್ರಿ ವಾಪಸ್ ಆಗುತ್ತೇವೆ ಎಂಬ ವಿಶ್ವಾಸವೂ ಇರಲಿಲ್ಲ. ಜೀವದ ಹಂಗು ತೊರೆದು ಹೋರಾಡಿ ಸ್ವಾತಂತ್ರ್ಯ ಗಳಿಸಿ ಕೊಟ್ಟರು. ಆದರೆ, ಬದಲಾದ ಸನ್ನಿವೇಶದಲ್ಲಿ ಸ್ವಾತಂತ್ರ್ಯಕ್ಕೆ ಬೆಲೆಯೇ ಇಲ್ಲದಂತಾಗಿದೆ. ಪಾಶ್ಚಿಮಾತ್ಯ ಸಂಸ್ಕೃತಿ



ಸ್ವಾತಂತ್ರ್ಯ ಸಂಭ್ರಮಾಚರಣೆ, ಕೆಂಗಲ್ ಹನುಮಂತಯ್ಯ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ನಿ.ನ್ಯಾ. ಶಿವರಾಜ ಪಾಟೀಲ್, ಪಾವಗಡ ಪ್ರಕಾಶ ರಾವ್, ವೂಡೇ ಪಿ.ಕೃಷ್ಣ, ವಿಜಯ ಸಮರ್ಥ ಇತರರಿದ್ದರು.

ಮೇಲಿನ ವ್ಯಾಮೋಹವೇ ಇದಕ್ಕೆ ಮುಖ್ಯ ಕಾರಣ. ತಾಯ್ನಾಡಿನ ನೀರು, ಗಾಳಿ, ಮಣ್ಣನ್ನು ಅನುಭವಿಸಿದ ಬಳಿಕ ವಿದೇಶಕ್ಕೆ ಹಾರುತ್ತಿರುವುದು ವಿಪರ್ಯಾಸ. ವಿಚ್ಛೇದನ ಪ್ರಕರಣ ಅಧಿಕವಾಗಲು ಸಹ ಪಾಶ್ಚಿಮಾತ್ಯ ಸಂಸ್ಕೃತಿಯ ಅನುಕರಣೆಯೇ ಮುಖ್ಯ ಕಾರಣ ಎಂದು ಪ್ರಕಾಶರಾವ್ ಅಭಿಪ್ರಾಯಪಟ್ಟರು.

ಸಂಸ್ಕೃತಿ ಬಗ್ಗೆ ಅಭಿಮಾನವಿರಲಿ: ಶ್ರೀಮಂತ ಸಂಸ್ಕೃತಿ ನಮ್ಮದು. ಇದಕ್ಕೆ ಚ್ಯುತಿ ಬಾರದಂತೆ ಹಿರಿಯರು ಕಾಪಾಡಿಕೊಂಡು ಬಂದಿದ್ದಾರೆ. ವಿವೇಕಾನಂದರು ವಿದೇಶದಲ್ಲಿ ಸಹ ನಮ್ಮ ಸಂಸ್ಕೃತಿಯ ಬೀಜ ಬಿತ್ತಿದರು. ಆದರೆ, ಯುವಜನಾಂಗ ನಮ್ಮ ಸಂಸ್ಕೃತಿಯ ಮಹತ್ವ ಅರಿತುಕೊಳ್ಳಲು ವಿಫಲವಾಗುತ್ತಿರುವುದು

> ಎಲ್ಲ ವರ್ಗದವರನ್ನು ಸಮಾನ ದೃಷ್ಟಿಯಲ್ಲಿ ಕಂಡು, ಅಗತ್ಯ ಪ್ರೋತ್ಸಾಹ ನೀಡಿದಲ್ಲಿ ಕರ್ನಾಟಕದ ಸರ್ವಾಂಗೀಣ ಅಭಿವೃದ್ಧಿ ಸಾಧ್ಯ. ರಾಷ್ಟ್ರಪಿತ ಗಾಂಧೀಜಿ ಸಾರಿದ ಆದರ್ಶಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳುವುದು ಅತಿಮುಖ್ಯ.
>
> । ಡಾ. ವೂಡೇ ಪಿ. ಕೃಷ್ಣ ಗಾಂಧಿ ಪ್ರತಿಷ್ಠಾನದ ಅಧ್ಯಕ್ಷ

ವಿಪರ್ಯಾಸ. ಇನ್ನು ದಿಗ್ಗಜರ ಪುತ್ಥಳಿಯನ್ನು ಆರಾಧಿಸಿದರೆ ಸಾಲದು. ಬದಲಾಗಿ ಅವರ ಇತಿಹಾಸ ಅರಿತು, ಬಿಟ್ಟುಹೋದ ಆದರ್ಶಗಳನ್ನು ಅಳವಡಿಸಿಕೊಳ್ಳಬೇಕು ಎಂದು ಸುಪ್ರೀಂಕೋರ್ಟ್ ನಿವೃತ್ತ ನ್ಯಾಯಮೂರ್ತಿ ಶಿವರಾಜ್ ಪಾಟೀಲ್ ಹೇಳಿದರು.

ಮೈಸೂರು ಸಿಲ್ಕ್ ಕ್ಲಾತ್ ಮರ್ಚೆಂಟ್ಸ್ ಕೋಆಪರೇಟಿವ್ ಬ್ಯಾಂಕ್ ಉಪಾಧ್ಯಕ್ಷ ಆರ್.ಪಿ. ರವಿಶಂಕರ್, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ, ಸಮರ್ಥ ಸಾಹಿತ್ಯ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನದ ಅಧ್ಯಕ್ಷ ರಾ. ವಿಜಯ ಸಮರ್ಥ ಉಪಸ್ಥಿತರಿದ್ದರು.

### ಪ್ರಶಸ್ತಿ ಪುರಸ್ಕೃತರು

'ವಿಜಯವಾಣಿ' ಸಂಪಾದಕ ಕೆ.ಎನ್. ಚನ್ನೇಗೌಡ ಹಾಗೂ 'ದಿಗ್ವಿಜಯ 24X7 ನ್ಯೂಸ್' ಸಂಪಾದಕ ಆರ್. ಚೇತನ್ ಸೇರಿ ವಿವಿಧ ಕ್ಷೇತ್ರಗಳ 35 ಸಾಧಕರಿಗೆ ನಿವೃತ್ತ ನ್ಯಾಯಮೂರ್ತಿ ಶಿವರಾಜ್ ಪಾಟೀಲ್ ಕೆಂಗಲ್ ಹನುಮಂತಯ್ಯ ಪ್ರಶಸ್ತಿ ಪ್ರದಾನ ಮಾಡಿದರು. ಡಾ. ಕಾಮಿನಿ ರಾವ್ (ವೈದ್ಯಕೀಯ), ಕಂಬ್ಯಾಣಿ ಶರಣಪ್ಪ, ಡಾ.ಎಂ.ಜಿ.ಆರ್. ಅರಸ್ (ಸಾಹಿತ್ಯ), ಎಂ.ಎಸ್. ನಾಗರಾಜ ಗುಪ್ತ (ಉದ್ಯಮ), ಗಜಾನನ ಉಮೇಶ್ ಭಟ್ (ಮಾಧ್ಯಮ), ವೈ.ಕೆ. ಸುಬ್ಬಯ್ಯ ಶೆಟ್ಟಿ (ಸಮಾಜ ಸೇವೆ), ಕೆ.ಪಿ. ಪುತ್ತೂರಾಯ (ಹಾಸ್ಯ ಭಾಷಣಕಾರ), ಲೋಕೇಶ್ (ವಿದ್ವಾಂಸ) ಮುತ್ತಿತರರಿಗೆ ಪ್ರಶಸ್ತಿ ವಿತರಿಸಲಾಯಿತು.

ಕರ್ನಾಟಕ

IV | ನಮ್ಮ

ಭಾನುವಾರ, 12 ಆಗಸ್ಟ್ 2018

### ಅಭಿನಂದನಾ ಗ್ರಂಥ ಲೋಕಾರ್ಪಣೆಯಲ್ಲಿ ಮಾಜಿ ಸಚಿವ ಟಿ.ಬಿ. ಜಯಚಂದ್ರ

# ದೇಶದಲ್ಲಿ ಗುರು ಪರಂಪರೆಗೆ ವಿಶೇಷ ಸ್ಥಾನ

**ವಿಕ ಸುದ್ದಿಲೋಕ** ಸಿರಾ



ಸಿರಾ ಸರಕಾರಿ ಬಾಲಕಿಯರ ಸರಕಾರಿ ಪಪೂ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ಪಿ.ಎಚ್.ಮಹೇಂದ್ರಪ್ಪನವರ ಸೇವೆ ಸ್ಮರಿಸುವ ಅನುಭಾವದ ಅಣ್ಣ ಮಹೇಂದ್ರಣ್ಣ ಎಂಬ ಅಭಿನಂದನಾ ಗ್ರಂಥವನ್ನು ಶ್ರೀ ವೀರೇಶಾನಂದ ಸರಸ್ವತಿ ಸ್ವಾಮಿ ಬಿಡುಗಡೆ ಮಾಡಿದರು. ಮಾಜಿ ಸಚಿವ ಟಿ.ಬಿ.ಜಯಚಂದ್ರ ಮತ್ತಿತರರು ಹಾಜರಿದ್ದರು.

ಯಾವ ದೇಶದಲ್ಲಿಯೂ ಇಲ್ಲದಂತಹ ಗುರು ಪರಂಪರೆ ಭಾರತದಲ್ಲಿದ್ದು, ಇಲ್ಲಿ ಗುರುವಿಗೆ ವಿಶಿಷ್ಟ ಸ್ಥಾನ ನೀಡಲಾಗಿದೆ. ಈ ನಿಟ್ಟಿನಲ್ಲಿ ಸೇವೆ ಸಲ್ಲಿಸಿರುವ ವಿಶ್ರಾಂತ ಪ್ರಾಂಶುಪಾಲ ಪಿ.ಎಚ್.ಮಹೇಂದ್ರಪ್ಪನವರ ಸೇವೆ ಅಭಿನಂದನೀಯ ಎಂದು ಮಾಜಿ ಕಾನೂನು ಸಚಿವ ಟಿ.ಬಿ.ಜಯಚಂದ್ರ ತಿಳಿಸಿದರು.

ನಗರದ ಬಾಲಕಿಯರ ಸರಕಾರಿ ಪಪೂ ಕಾಲೇಜಿನಲ್ಲಿ ಶನಿವಾರ ಹಮ್ಮಿಕೊಂಡಿದ್ದ ಪಿ.ಎಚ್. ಮಹೇಂದ್ರಪ್ಪನವರ ಸೇವೆ ಸ್ಮರಿಸುವ ಅನುಭಾವದ ಅಣ್ಣ ಮಹೇಂದ್ರಣ್ಣ ಎಂಬ ಅಭಿನಂದನಾ ಗ್ರಂಥದ ಉದ್ಘಾಟನೆ ನೆರವೇರಿಸಿ ಮಾತನಾಡಿದ ಅವರು, ಕೇವಲ 100 ವಿದ್ಯಾರ್ಥಿಗಳಿದ್ದ ಸರಕಾರಿ ಬಾಲಕಿಯರ ಪಪೂ ಕಾಲೇಜನ್ನು ತಾಲೂಕಿನಲ್ಲಿ ಹೆಸರುವಾಸಿಯಾಗುವಂತೆ ಮಾಡಿ ಇಂದು 1200ಕ್ಕೂ ಹೆಚ್ಚು ವಿದ್ಯಾರ್ಥಿಗಳು ದಾಖಲಾಗುವಂತೆ ಶ್ರಮಿಸಿದ ಪಿ.ಎಚ್.ಮಹೇಂದ್ರಪ್ಪನವರ ಸೇವೆ ಸ್ಮರಣೀಯವಾದುದು. ಇಂದು ಸಮಾಜ ತಿದ್ದುವ ಗುರುಗಳು ಬೇಕಿದ್ದಾರೆ. ಅಂತಹ ಗುರುಗಳಲ್ಲಿ ಪಿ.ಎಚ್.ಮಹೇಂದ್ರಪ್ಪನವರು ಒಬ್ಬರು ಎಂದರು.

ಅಭಿನಂದನಾ ಗ್ರಂಥ ಲೋಕಾರ್ಪಣೆ ಮಾಡಿ ಮಾತನಾಡಿದ ತುಮಕೂರು ರಾಮಕೃಷ್ಣ ಆಶ್ರಮದ ವೀರೇಶಾನಂದ ಸರಸ್ವತಿ ಸ್ವಾಮಿ, ಸಮಾಜದಲ್ಲಿ ಶಿಕ್ಷಕರು ಉತ್ತಮರಾಗಿದ್ದರೆ, ವಿದ್ಯಾರ್ಥಿಗಳು ಉತ್ತಮ ಪ್ರಜೆಗಳಾಗುತ್ತಾರೆ. ಮಕ್ಕಳನ್ನು ಶ್ರೇಷ್ಠ ಪ್ರಜೆಗಳನ್ನಾಗಿಸುವಲ್ಲಿ ಶಿಕ್ಷಕರ ಪಾತ್ರ ಬಹು ಮುಖ್ಯವಾದುದು. ಈ ನಿಟ್ಟಿನಲ್ಲಿ ಪಿ.ಎಚ್.ಮಹೇಂದ್ರಪ್ಪನವರ ಪಾತ್ರ ಮರೆಯಲಾಗದಂತಹುದು ಎಂದರು.

ಶೇಷಾದ್ರಿಪುರಂ ಕಾಲೇಜಿನ ಗೌರ ಕಾರ್ಯದರ್ಶಿ ವುಡೇ ಕೃಷ್ಣ ಮಾತನಾಡಿ, ಒಬ್ಬ ವ್ಯಕ್ತಿಯು ಕಾಯಕ ತತ್ತ್ವ, ಸತ್ಯ, ಮಾನವೀಯ ಮೌಲ್ಯ ಹೊಂದಿದಾಗ ತನ್ನ ಜೀವನದಲ್ಲಿ ಏನನ್ನಾದರೂ ಸಾಧಿಸಬಹುದು ಎಂಬುದಕ್ಕೆ ಪಿ.ಎಚ್. ಮಹೇಂದ್ರಪ್ಪನವರೇ ಸಾಕ್ಷಿ ಎಂದರು.

ಅಭಿನಂದನೆ ಸ್ವೀಕರಿಸಿ ಮಾತನಾಡಿದ ಪಿ.ಎಚ್. ಮಹೇಂದ್ರಪ್ಪ, ತಮ್ಮ ಸೇವೆ ಗುರುತಿಸಿ, ಪ್ರಶಂಸಿಸುತ್ತಿರುವುದರಿಂದ ತಮ್ಮ ಮೇಲೆ ಇನ್ನೂ ಹೆಚ್ಚಿನ ಜವಾಬ್ದಾರಿ ಬಂದಿದೆ ಎಂದು ಹೇಳಿದರು.

ಪಪೂ ಶಿಕ್ಷಣ ಇಲಾಖೆ ಅಶೋಕ್ ಕುಮಾರ್, ಪ್ರಾಂಶುಪಾಲ ಬಿ.ಪಿ.ಪಾಂಡುರಂಗಯ್ಯ, ವೈದ್ಯರ ಸಂಘದ ಅಧ್ಯಕ್ಷ ಡಾ.ರಾಮಕೃಷ್ಣ, ನಗರಸಭೆ ಅಧ್ಯಕ್ಷ ಅಮಾನುಲ್ಲಾ ಖಾನ್, ಸರಕಾರಿ ನೌಕರರ ಸಂಘದ ಅಧ್ಯಕ್ಷ ಲಕ್ಷ್ಮೀಶ್, ಸಹಕಾರಿ ರತ್ನ ಎಸ್.ಎನ್. ಕೃಷ್ಣಯ್ಯ, ಕಾಂಗ್ರೆಸ್ ಕಾನೂನು ಮತ್ತು ಮಾನವ ಘಟಕಗಳ ಅಧ್ಯಕ್ಷ ಗುರುಮೂರ್ತಿ, ಕಾಂಗ್ರೆಸ್ ಅಲ್ಪಸಂಖ್ಯಾತರ ಘಟಕದ ರಾಜ್ಯ ಉಪಾಧ್ಯಕ್ಷ ಅಬ್ದುಲ್ಲಾ ಖಾನ್, ತಾ. ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಡಾ.ನಂದೀಶ್ವರ್, ನಿಕಟಪೂರ್ವ ಅಧ್ಯಕ್ಷ ವೈ.ನರೇಶ್ ಬಾಬು ಸೇರಿದಂತೆ ಇತರರಿದ್ದರು.

ಭಾನುವಾರ,
12-08-2018

# ಸಾಧಕರಿಗೆ ಕೆಂಗಲ್ ಹನುಮಂತಯ್ಯ ಹೆಸರಿನಲ್ಲಿ ಪ್ರಶಸ್ತಿ ನೀಡುತ್ತಿರುವುದು ಶ್ಲಾಘನೀಯ



ಬೆಂಗಳೂರು, ಆ. 13- ಕೆಂಗಲ್ ಹನುಮಂತಯ್ಯನವರ ಹೆಸರಿನಲ್ಲಿ ಸಾಧಕರನ್ನು ಗುರುತಿಸಿ ಪ್ರಶಸ್ತಿ ನೀಡುತ್ತಿರುವುದು ಅಭಿನಂದನಾರ್ಹ ಎಂದು ಸರ್ವೋಚ್ಚ ನ್ಯಾಯಾಲಯದ ವಿಶ್ರಾಂತ ನ್ಯಾಯಮೂರ್ತಿ ಶಿವರಾಜ್ ಪಾಟೀಲ್ ತಿಳಿಸಿದರು.

ಕನ್ನಡ ಸಾಹಿತ್ಯ ಪರಿಷತ್‌ನ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಸಮರ್ಥ ಸಾಹಿತ್ಯ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನ ವತಿಯಿಂದ ಹಮ್ಮಿಕೊಂಡಿದ್ದ ಸ್ವಾತಂತ್ರ್ಯ ಸಂಭ್ರಮಾಚರಣೆ ಮತ್ತು ಕೆಂಗಲ್ ಹನುಮಂತಯ್ಯ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಮಾತನಾಡಿದ ಅವರು, ಪ್ರತಿಷ್ಠಾನದ ವತಿಯಿಂದ ಸಾಧಕರಿಗೆ ಪ್ರಶಸ್ತಿ ನೀಡುತ್ತಿರುವುದು ಪ್ರಶಂಸನೀಯ. ಹೀಗೆ ಸಾಧಕರನ್ನು ಗುರುತಿಸಿ ಗೌರವಿಸುವುದು ಸಾಮಾಜಿಕ ಕರ್ತವ್ಯವಾಗಬೇಕು ಎಂದು ಹೇಳಿದರು.

ಪ್ರಶಸ್ತಿಗಳು ಪ್ರಾಮಾಣಿಕವಾಗಿ ಸಾಧಕರಿಗೆ ಸಲ್ಲಬೇಕು, ಪ್ರಶಸ್ತಿ ಪ್ರದಾನ ಮಾಡುವವರು ಮತ್ತು ಪಡೆದುಕೊಳ್ಳುವವರು ಹೆಮ್ಮೆ ಪಡುವಂತಿರಬೇಕು. ಅಂತಹ ಪ್ರಶಸ್ತಿಗಳು ಮಾತ್ರ ಮೌಲ್ಯಯುತವಾಗಿರುತ್ತವೆ ಎಂದರು.

ಪ್ರಶಸ್ತಿಗಳನ್ನು ಪಡೆದುಕೊಳ್ಳಬೇಕೇ ಹೊರತು ಅದನ್ನು ಹೊಡೆದುಕೊಳ್ಳಬಾರದು ಎಂದು ತಿಳಿಸಿದರು.

ಹಿರಿಯ ವಿದ್ವಾಂಸ ಪಾವಗಡ ಪ್ರಕಾಶ್ ರಾವ್ ಮಾತನಾಡಿ, ಸ್ವಾತಂತ್ರ್ಯ ಪಡೆಯುವುದಕ್ಕಾಗಿ ನಡೆದ ಹೋರಾಟಗಳ ಬಗ್ಗೆ ಈಗಿನ ಯುವಕರಿಗೆ ಅರಿವಿಲ್ಲ. ಗಾಂಧೀಜಿ ಅವರು ಒಂದು ಕರೆ ನೀಡಿದರೆ ಸಾವಿರಾರು ಜನರು ಬೀದಿಗಿಳಿದು ಹೋರಾಟ ಮಾಡುತ್ತಿದ್ದರು. ಅವರಿಗೆ ಮತ್ತೆ ನಾವು ಮನೆಗೆ ಹೋಗುತ್ತೇವೆ ಎಂಬ ಭರವಸೆ ಇಲ್ಲದಿದ್ದರೂ ಹೋರಾಟಗಳಲ್ಲಿ ಪಾಲ್ಗೊಳ್ಳುತ್ತಿದ್ದರು ಎಂದು ತಿಳಿಸಿದರು.

ಕಾರ್ಯಕ್ರಮದಲ್ಲಿ 35 ಮಂದಿ ಸಾಧಕರಿಗೆ ಪ್ರಶಸ್ತಿ ನೀಡಲಾಯಿತು. ಮೈಸೂರು ಸಿಲ್ಕ್ ಕ್ಲಾತ್ ಮರ್ಚೆಂಟ್ಸ್ ಕೋ-ಆಪರೇಟಿವ್ ಬ್ಯಾಂಕ್‌ನ ಆರ್.ಪಿ.ರವಿಶಂಕರ್, ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ವುಡೇ.ಪಿ.ಕೃಷ್ಣ ಮುಂತಾದವರು ಇದ್ದರು.

# ಪ್ರಜ್ಞಾವಂತಿಕೆ ಬೆಳೆಸಿಕೊಳ್ಳಲು ವಿದ್ಯಾರ್ಥಿಗಳಿಗೆ ಕರೆ



ಶಿರಾ

ವಿದ್ಯಾರ್ಥಿಗಳ ಬದುಕನ್ನು ಹಸನು ಗೊಳಿಸುವ ದಿವ್ಯಶಕ್ತಿಯು ಓರ್ವ ಶಿಕ್ಷಕನಲ್ಲಿದ್ದು ಆದರ್ಶ ಶಿಕ್ಷಕರನ್ನು ಅನುಕರಣೆ ಮಾಡುವ ಹಾಗೂ ಸಮಾಜದ ಹಿತವನ್ನು ಬಯಸುವ ನಿಟ್ಟಿನಲ್ಲಿ ವಿದ್ಯಾರ್ಥಿಗಳು ಪ್ರಜ್ಞಾವಂತಿಕೆಯನ್ನು ಬೆಳೆಸಿಕೊಳ್ಳಬೇಕಿದೆ ಎಂದು ಶ್ರೀ ರಾಮಕೃಷ್ಣ ವಿವೇಕಾನಂದಾಶ್ರಮದ ಪೀಠಾಧ್ಯಕ್ಷ ಶ್ರೀ ವೀರೇಶಾನಂದ ಸರಸ್ವತಿಸ್ವಾಮೀಜಿ ತಿಳಿಸಿದರು.

ಶಿರಾ ನಗರದ ಬಾಲಕಿಯರ ಸರ್ಕಾರಿ ಪ.ಪೂ. ಕಾಲೇಜಿನಲ್ಲಿ ಶನಿವಾರ ಆಯೋಜಿಸಲಾಗಿದ್ದ ಅನುಭಾವದ ಅಣ್ಣ ಮಹೇಂದ್ರಣ್ಣ ಎನ್ನುವ ಅಭಿನಂದನಾ ಗ್ರಂಥವನ್ನು ಲೋಕಾರ್ಪಣೆಗೊಳಿಸಿ ವೀರೇಶಾನಂದ ಸರಸ್ವತಿ ಸ್ವಾಮೀಜಿ ಮಾತನಾಡಿದರು.

60 ವರ್ಷಗಳ ಯುವಕನಂತಿರುವ ನಿವೃತ್ತ ಪ್ರಾಂಶುಪಾಲ [illegible] ಹೆಚ್.ಮಹೇಂದ್ರಪ್ಪ ಅವರ ಸೇವೆ ಅತ್ಯಂತ ಗಣನೀಯವಾಗಿದೆ. ಓರ್ವ ಉಪನ್ಯಾಸಕ, ಪ್ರಾಂಶುಪಾಲರು, ಆಜನ್ಮ ಬ್ರಹ್ಮಚಾರಿಗಳೂ ಆಗಿರುವ ಮಹೇಂದ್ರಪ್ಪನವರ ಕೊಡುಗೆ ಶೈಕ್ಷಣಿಕ ಕ್ಷೇತ್ರಕ್ಕೆ ಸಾಕಷ್ಟಾಗಿದೆ. ಆದರ್ಶ ಶಿಕ್ಷಕರ ಪೈಕಿ ಅಪರೂಪದ ವ್ಯಕ್ತಿಯಾಗಿ ಕಾಣುವ ಅವರನ್ನು ಕುರಿತ ಅಭಿನಂದನಾ ಗ್ರಂಥ ನಿಜಕ್ಕೂ ಅರ್ಥಪೂರ್ಣ ಎಂದರು.

ಯಾವತ್ತಿಗೂ ಪ್ರಪಂಚದಲ್ಲಿ ಕೆಟ್ಟದ್ದು ಹಾಗೂ ಒಳ್ಳೆಯದ್ದು ಇದ್ದೇ ಇರುತ್ತದೆ. ಕೆಟ್ಟದ್ದು ತಾನೇ ತಾನಾಗಿ ದೂರಗೊಳ್ಳುತ್ತಾ ಹೋಗುತ್ತದೆ. ಒಳ್ಳೆಯದ್ದನ್ನು ನಾವೇ ನಾವಾಗಿ ಹೆಕ್ಕಿಕೊಂಡು ತಬ್ಬಿಕೊಂಡು ಮುನ್ನಡೆಯಬೇಕಿದೆ. ಇಂತಹ ತತ್ವದಡಿಯಲ್ಲಿ ಸಾಗಿದವರು ಮಾತ್ರ ಆದರ್ಶ ಶಿಕ್ಷಕರಾಗಲು ಸಾಧ್ಯ. ಜೀವನ ಎಂದೂ ಕೂಡ ನಿರರ್ಥಕವಲ್ಲ. ಅಪರೂಪಕ್ಕೆ ಲಭ್ಯವಾದ ಜೀವನವನ್ನು ಹಾಳುಗೆಡವಿಕೊಳ್ಳುವ ಸಣ್ಣಯುಕ್ತಿಗೂ ಆಸ್ಪದ ಯಾರೂ ಮಾಡಿಕೊಳ್ಳಬಾರದು. ಜೀವನದಲ್ಲಿ ನಾವು ಗಳಿಸಿದ್ದು ಸಾಧನೆಯಾಗಿ ಉಳಿಯಬೇಕು ಎಂದರು.

ಯಾವ ರೈತನು ಉತ್ತಮ ಬೆಳೆಯನ್ನು ಬೆಳೆಯುತ್ತಾನೋ ಅಂತಹ ರೈತನ ಹೊಲದಲ್ಲಿ ಆತನಿಗೆ ಅರಿವಿಲ್ಲದೆಯೇ ಫಲವತ್ತಾಗಿ ಕಳೆಯೂ ಬೆಳೆದಿರುತ್ತದೆ. ಬೆಳೆಯ ಕಡೆ ಹೆಚ್ಚು ಒಲವು ನೀಡುವಂತೆ ಕಳೆಯನ್ನು ತೆಗೆಯುವ ಕಡೆಯೂ ಅತಿ ಹೆಚ್ಚು ಒಲವು ನೀಡಿದಾಗ ಬೆಳೆದ ಬೆಳೆಗೆ ಉತ್ತಮ ಬೆಲೆ ಸಿಗಲು ಸಾಧ್ಯ. ಇಲ್ಲವಾದಲ್ಲಿ ಕಳೆಯು ರೈತನ ಬದುಕನ್ನು ಕೆಡಿಸಿಬಿಡುತ್ತದೆ ಎನ್ನುವ ಉದಾಹರಣೆ ನೀಡುವ ಮೂಲಕ ವೀರೇಶಾನಂದರು ಒಳಿತು-ಕೆಡುಕುಗಳ ಬಗ್ಗೆ ವಿದ್ಯಾರ್ಥಿಗಳಿಗೆ ಮನವರಿಕೆ ಮಾಡಿಕೊಟ್ಟರು.

ತಪ್ಪು ಮಾಡಿದ ಯಾವುದೇ ವ್ಯಕ್ತಿಯು ತನ್ನ ತಪ್ಪನ್ನು ತಿದ್ದಿಕೊಳ್ಳಲು ಅವಕಾಶವಿದೆ. ಗೃಹಸ್ಥರು ದೇವರ ಪ್ರೀತಿಗೆ ಪಾತ್ರರಾದರೆ, ಬ್ರಹ್ಮಚಾರಿಗಳು ನಂಬಿಕೆಗೆ ಪಾತ್ರರಾಗುತ್ತಾರೆ. ಬ್ರಹ್ಮಚರ್ಯದ ಜೊತೆಗೆ ಶಿಕ್ಷಣ ತಜ್ಞರೂ ಆಗಿ ಮಕ್ಕಳ ಶೈಕ್ಷಣಿಕ ಬದುಕನ್ನು ಹಸನು ಮಾಡಿದ ಮಹೇಂದ್ರಪ್ಪನವರು ಮುಂದೆಯೂ ತಮ್ಮ ಶಿಕ್ಷಣದ ಸೇವೆಯನ್ನು ಮುಂದುವರಿಸಬೇಕಿದೆ ಎಂದರು.

ಆಧ್ಯಾತ್ಮವನ್ನು ಹೇಳಿಕೊಡಲು ಸನ್ಯಾಸಿಯೇ ದಿಕೂಚಿಯಾಗಿ ನಿಲ್ಲಬೇಕಿದೆ. ಗೃಹಿಣಿಯಾದವಳಿಗೆ ಮನೆ ಅರ್ಚಕನಿಗೆ ಗುಡಿ, ಶಿಕ್ಷಕನಿಗೆ ಶಾಲೆ ಸನ್ಯಾಸಿಗೆ ಮಠ ಎನ್ನುವುದು ಯಾವತ್ತಿಗೂ [illegible] ಸನ್ಯಾಸಿಯಾದವನು ಸರಸ್ವತಿಯಾಗಬೇಕು. ಸನ್ಯಾಸಿಯ ನಾಲಿಗೆಯಲ್ಲಿ ಸರಸ್ವತಿಯು ನಲಿದಾಡಿದಾಗ ವಿದ್ಯಾರ್ಥಿಗಳ ಹಾಗೂ ಸಾರ್ವಜನಿಕರ ಬದುಕು ಹಸನಾಗಲು ಸಾಧ್ಯ. ಸಂಸಾರ ವಂಚಿತರಾಗಿ ಯಾರೂ ಕೂಡ ಬದುಕಬಾರದು ಎಂದು ವೀರೇಶಾನಂದ ಸರಸ್ವತಿಸ್ವಾಮೀಜಿ ಹೇಳಿದರು.

ಮಾಜಿ ಸಚಿವ ಟಿ.ಬಿ.ಜಯಚಂದ್ರ ಕಾರ್ಯಕ್ರಮಕ್ಕೆ ಚಾಲನೆ ನೀಡಿ ಮಾತನಾಡಿ, ಶರೀರ, ಮನಸ್ಸು ಹಾಗೂ ಆತ್ಮವನ್ನು ಗೆಲ್ಲುವ ಶಕ್ತಿ ಇದ್ದವರು ಮಾತ್ರ ಜನರ ಮನಸ್ಸನ್ನು ಗೆಲ್ಲಲು ಸಾಧ್ಯ. ಆ ಕೆಲಸವನ್ನು ಮಹೇಂದ್ರಪ್ಪ

**ಮುಖ್ಯಾಂಶಗಳು**

- ಶಿರಾದಲ್ಲಿ ಅಭಿನಂದನಾ ಗ್ರಂಥ ಬಿಡುಗಡೆ
- ಬಿ.ಹೆಚ್.ಮಹೇಂದ್ರಪ್ಪ ಕುರಿತ ಅಭಿನಂದನಾ ಗ್ರಂಥ
- ಶ್ರೀ ವೀರೇಶಾನಂದ ಸರಸ್ವತಿಸ್ವಾಮೀಜಿಗಳಿಂದ ಲೋಕಾರ್ಪಣೆ
- ಮಾಜಿ ಸಚಿವ ಜಯಚಂದ್ರ ಕಾರ್ಯಕ್ರಮದಲ್ಲಿ ಭಾಗಿ

ಪ್ರಾಮಾಣಿಕವಾಗಿ ಮಾಡಿದ್ದಾರೆ. ನಿಜವಾದ ಗುರುವಿನ ಲಕ್ಷಣ ಅವರಲ್ಲಿದೆ. ತ್ರಿಮೂರ್ತಿಗಳನ್ನು ಮೀರಿದವರು ಮಾತ್ರ ನಿಜವಾದ ಗುರು ಎನ್ನಿಸಿಕೊಳ್ಳಲು ಸಾಧ್ಯ ಎಂದರು.

ಭಾರತ ಬೆಳಗಲು ರಾಮಕೃಷ್ಣ ಪರಮಹಂಸರು, [illegible] ಸೇರಿದಂತೆ ಅನೇಕ [illegible] ಆದರ್ಶಗಳೇ ಕಾರಣ ಮೂಲ ವೇದ ಮತ್ತು ಉಪನಿಷತ್ತುಗಳು. ಇಂದು ಶಿಕ್ಷಣ ಎನ್ನುವುದು ವ್ಯಾಪಾರೀಕರಣವಾಗುತ್ತಿರುವ ಹೊತ್ತಿನಲ್ಲಿ ಅಪರೂಕ್ಕೆಂಬಂತೆ ಮಹೇಂದ್ರಪ್ಪನಂತಹ ಶಿಕ್ಷಕರು ನಮ್ಮಲ್ಲಿರುವುದು ಹೆಮ್ಮೆಯ ಸಂಗತಿ ಎಂದು ಜಯಚಂದ್ರ ಹೇಳಿದರು.

ಡಾ.ನಂದೀಶ್ವರ್ ಅವರ ಸಂಪಾದಕತ್ವದ ಅನುಭಾವದ ಅಣ್ಣ ಮಹೇಂದ್ರಣ್ಣ ಅಭಿನಂದನಾ ಗ್ರಂಥವನ್ನು ಕುರಿತು ಪ್ರೊಡೇ ಪಿ.ಕೃಷ್ಣ ಮಾತನಾಡಿ ಆಧ್ಯಾತ್ಮದ ಲೇಪನ ಶಿಕ್ಷಣಕ್ಕೆ ಅತ್ಯಗತ್ಯವಾಗಿದೆ. ಓರ್ವ ಉಪನ್ಯಾಸಕರಾಗಿ ಅದರೊಟ್ಟಿಗೆ ಆಧ್ಯಾತ್ಮದ ಬಗ್ಗೆಯೂ ಅಪಾರ ವಿಚಾರ ತಿಳಿದಿರುವ ಮಹೇಂದ್ರಪ್ಪ ಓರ್ವ ಲೇಖಕರೂ ಹೌದು. ಮಹೇಂದ್ರಪ್ಪ ಅವರ ಕುರಿತ ಉತ್ತಮ ಲೇಖನಗಳು ಈ ಹೊತ್ತಿಗೆಯಲ್ಲಿ ಶೇಖರಣೆಗೊಂಡಿವೆ. ಸೇವೆ ಹಾಗೂ ತ್ಯಾಗಗಳು ರಾಷ್ಟ್ರೀಯ ಸೇವೆಗಳಿದ್ದಂತೆ. ಅಂತಹ ಸೇವಾ ಕೈಂಕರ್ಯಗಳನ್ನು ಕೈಗೊಳ್ಳುವುದು ಎಲ್ಲರ ಕರ್ತವ್ಯವಾಗಬೇಕು ಎಂದರು.

ನಗರಸಭೆಯ ಅಧ್ಯಕ್ಷ ಅಮಾನುಲ್ಲಾ ಖಾನ್, ಪ್ರೊ.ಕೆ.ಹನುಮಂತರಾಯಪ್ಪ, ಅಶೋಕ್‌ಕುಮಾರ್, ಎ.ಆರ್.ಶ್ರೀನಿವಾಸಯ್ಯ, ಪ್ರಾಂಶುಪಾಲ ಬಿ.ಪಿ.ಪಾಂಡುರಂಗಯ್ಯ, ಬಿ.ಎಂ.ಲಕ್ಕೇಶ್, ವಕೀಲರಾದ ಗುರುಮೂರ್ತಿ, ಕೃಷ್ಣಾನಾಯ್ಕ, ಲೋಕನಾಥ್, ಬಿ.ಕೆ.ಕಲಾ, [illegible].ಸಿ. ಅಧ್ಯಕ್ಷ ಸತ್ಯನಾರಾಯಣ್, ಡಾ.[illegible] ಕೃಷ್ಣ, [illegible]ಮೂರ್ತಿ, ಡಾ.ಡಿ.ಎಂ.ಗೌಡ, [illegible]ನ್.ಕೃಷ್ಣಯ್ಯ ಸೇರಿದಂತೆ ಅನೇಕ [illegible]ಮುಖರು ಹಾಜರಿದ್ದರು. ಡಾ.ನಂದೀ[illegible] ಸ್ವಾಗತಿಸಿ, ಚಿದಾನಂದ್ ವಂದಿಸಿದರು.

ಸಂಜೆವಾಣಿ

ಭಾನುವಾರ 12 ಆಗಸ್ಟ್ 2018



ನಗರದ ಗಾಂಧಿ ಭವನದಲ್ಲಿ ಹಿರಿಯ ಸ್ವಾತಂತ್ರ್ಯದ ಹೋರಾಟಗಾರ ಹೆಚ್.ಎಸ್. ದೊರೆಸ್ವಾಮಿ ಅವರ 100ನೇ ಜನ್ಮದಿನಾಚರಣೆ ಕಾರ್ಯಕ್ರಮದಲ್ಲಿ ದೊರೆಸ್ವಾಮಿ ದಂಪತಿಗಳನ್ನು ಮಾಜಿ ಸಚಿವ ಹೆಚ್. ಪಾಟೀಲ್‌ರವರು ಸನ್ಮಾನಿಸಿದರು. ಕೇಂದ್ರದ ಮಾಜಿ ಸಚಿವರುಗಳಾದ ಎಂ.ವಿ. ರಾಜಶೇಖರನ್, ಸಿ.ಕೆ. ಜಾಫರ್ ಷರೀಫ್, ಶಾಸಕ ಎ.ಟಿ. ರಾಮಸ್ವಾಮಿ, ಅಧ್ಯಕ್ಷ ವೂಡೆ ಪಿ. ಕೃಷ್ಣ ಇದ್ದಾರೆ.

ಸಂಯುಕ್ತ ಕರ್ನಾಟಕ
ಸೋಮವಾರ, 6, ಆಗಸ್ಟ್, 2018

ಕನ್ನಡವೇ ಸತ್ಯ ಕನ್ನಡವೇ ನಿತ್ಯ

# ಸಂಘರ್ಷವಿಲ್ಲದೆ ಕನ್ನಡ ಕಲಿಸಲು ಸಲಹೆ



ಮೇಘ ಮೈತ್ರಿ ಪ್ರಥಮ ಕನ್ನಡ ಸಾಹಿತ್ಯ ವೇದಿಕೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾಗಿ ಪುಸ್ತಕ ಮೇಳಕ್ಕೆ ಚಾಲನೆ ನೀಡುವ ಸಂದರ್ಭದಲ್ಲಿ ಸಮ್ಮೇಳನಾಧ್ಯಕ್ಷ ಎಸ್. ರಾಮಲಿಂಗೇಶ್ವರ, ಡಾ. ಬಂಜಗೆರೆ ಜಯಪ್ರಕಾಶ್, ವೂಡೇ ಪಿ. ಕೃಷ್ಣ, ಬೈರಮಂಗಲ ರಾಮೇಗೌಡ ಮತ್ತಿತರರಿದ್ದರು.

ಸಂ.ಕ. ಸಮಾಚಾರ ಬೆಂಗಳೂರು

ಹೊರಗಿನಿಂದ ಬಂದವರಿಗೆ ಕನ್ನಡ ಕಲಿಸಲು ಕನ್ನಡಪರ ಸಂಘಟನೆಗಳು ಮುಂದಾಗಬೇಕು ಎಂದು ಸಾಹಿತಿ ಎಸ್. ರಾಮಲಿಂಗೇಶ್ವರ ಸಲಹೆ ನೀಡಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಏರ್ಪಡಿಸಿದ್ದ ಮೇಘ ಮೈತ್ರಿ ಪ್ರಥಮ ಕನ್ನಡ ಸಾಹಿತ್ಯ ವೇದಿಕೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿ ಮಾತನಾಡಿದ ಅವರು, ಕನ್ನಡ ಪರವಾಗಿರುವ ಪ್ರತಿಯೊಂದು ಸಂಘಟನೆ ಕನ್ನಡದ ಬೆಳವಣಿಗೆಗೆ ವಿಭಿನ್ನ ರೀತಿಯ ಆಲೋಚನೆ ಇಟ್ಟುಕೊಂಡರೂ ಸಂಘರ್ಷದ ಹಾದಿಯಲ್ಲಿ ನಡೆಯದೆ, ಕಾನೂನಾತ್ಮಕ ನೆಲೆಗಟ್ಟಿನಲ್ಲಿ ಕನ್ನಡ ತಿಳಿಯದವರಿಗೆ ಕಲಿಸಲು-ತಿಳಿ ಹೇಳಲು ಮುಂದಾಗಬೇಕು. ಆಗ ಭಾಷಾ ಅಭಿವೃದ್ಧಿ ಸುಧಾರಣೆ ಕಾಣಲಿದೆ ಎಂದು ಹೇಳಿದರು.

ಶಿಕ್ಷಣ ಇಂದು ಮಾರಾಟ, ವ್ಯಾಪಾರದ ವಸ್ತುಗಳಾಗುತ್ತಿವೆ. ಸೇವೆ ಎಂಬ ಭಾವನೆ ಮರೆಯಾಗುತ್ತದೆ ಕೆಲವೊಂದು ಸಂಸ್ಥೆಗಳು ಅಪವಾದ ಎಂದೇ ಹೇಳಬೇಕು. ರೈತರ ಸಾಲ ಮನ್ನಾ ಮಾಡಲಾಗಿದೆ. ಸರ್ಕಾರ ಬೆಳೆದ ಧಾನ್ಯ ಉಚಿತವಾಗಿ ನೀಡುವ ಬದಲು ಉಚಿತ ಆರೋಗ್ಯ ಚಿಕಿತ್ಸೆ, ಗುಣಮಟ್ಟ ಶಿಕ್ಷಣ ಹಾಗೂ ಉದ್ಯೋಗ ಕಲ್ಪಿಸಲು ಮುಂದಾಗಲಿ ಎಂದು ನುಡಿದರು.

ರಾಜ್ಯ ಒಡೆದಾಳುವ ನೀತಿ ತೊಲಗಿಸಬೇಕು. ಎಲ್ಲಾ ಭಾಗದ ಅಭಿವೃದ್ಧಿಗೆ ಸರ್ಕಾರ ಗಮನ ನೀಡಬೇಕು ಎಂದ ಅವರು, ರಾಜಕಾರಣದಲ್ಲಿ ಮಹಿಳಾ ಮೀಸಲಾತಿಯನ್ನ ಪಂಚಾಯಿತಿ ಚುನಾವಣೆಗೆ ಜಾರಿಗೆ ಸೆಪಕ್ಕೆ ಮಾತ್ರ ತಂದು ಆಡಳಿತದಲ್ಲಿ ಮೇಲ್ವರ್ಗದವರೇ ಆಳ್ವಿಕೆ ಮಾಡುತ್ತಿದ್ದಾರೆ. ಕುಟುಂಬ ರಾಜಕಾರಣ ಹೆಚ್ಚಾಗುತ್ತಿದೆ. ಈ ಕುರಿತು ಜನಜಾಗೃತಿ ಮೂಡಿಸಬೇಕು ಎಂದು ಉಲ್ಲೇಖಿಸಿದರು.

ಕನ್ನಡ ಪುಸ್ತಕ ಪ್ರಾಧಿಕಾರದ ಮಾಜಿ ಅಧ್ಯಕ್ಷ ಡಾ.ಬಂಜಗೆರೆ ಜಯಪ್ರಕಾಶ್ ಮಾತನಾಡಿ, ಕನ್ನಡದ ಪ್ರಗತಿಯಲ್ಲಿ ಸಂಘಸಂಸ್ಥೆಗಳ ಪಾತ್ರ ಬಹು ದೊಡ್ಡದು. ಹೀಗಾಗಿ, ಪ್ರತಿಭಟಿಸುವ ಬದಲಾಗಿ, ಪ್ರೀತಿಯಿಂದ ಕನ್ನಡ ಕಲಿಕೆ ಮಾಡಬೇಕು ಎಂದು ಅಭಿಪ್ರಾಯಪಟ್ಟರೆ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ಅಖಂಡ ಕರ್ನಾಟಕ ಒಂದೇ ಆಗಿದೆ. ಆದರೆ, ಇತ್ತೀಚೆಗೆ ರಾಜಕೀಯ ಲಾಭಕ್ಕಾಗಿ ಪ್ರತ್ಯೇಕತೆಯ ಕೂಗೂ ಹುಟ್ಟು ಹಾಕಲಾಗಿದೆ. ಏಕೀಕರಣದ ಮಹತ್ವ ತಿಳಿಯದವರು ಪ್ರತ್ಯೇಕ ರಾಜ್ಯ ಬೇಕು ಎನ್ನುತ್ತಿದ್ದಾರೆ ಎಂದು ಅಸಮಾಧಾನ ವ್ಯಕ್ತಪಡಿಸಿದರು.

ಸಮ್ಮೇಳನದ ಧ್ವಜಾರೋಹಣವನ್ನು ಬೆಂಗಳೂರು ವಕೀಲರ ಸಾಹಿತ್ಯ ಕೂಟದ ಅಧ್ಯಕ್ಷ ನಂಜಪ್ಪ ನೆರವೇರಿಸಿದರು. ಎಸ್. ಆರ್.ವೆಂಕಟೇಶ್, ಕಸಾಪ ಜಿಲ್ಲಾಧ್ಯಕ್ಷ ಮಾಯಣ್ಣ; ಸಾಹಿತಿ ಡಾ.ಬೈರಮಂಗಲ ರಾಮೇಗೌಡ, ಗಣೇಶ್ ಕೊಡೂರು, ಡಾ.ಶೇಖರ ಮಾಲಿ ಪಾಟೀಲ ಸೇರಿದಂತೆ ಮತ್ತಿತರರು ಉಪಸ್ಥಿತರಿದ್ದರು

ವಾರ್ತಾ ಭಾರತಿ

ಬೆಂಗಳೂರು | ಸೋಮವಾರ, ಆಗಸ್ಟ್ 6, 2018



ಬೆಂಗಳೂರು ಚಾಮರಾಜಪೇಟೆಯ ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ರವಿವಾರ ನಡೆದ ಮೇಘ ಮೈತ್ರಿ ಪ್ರಥಮ ಕನ್ನಡ ಮತ್ತು ಸಾಹಿತ್ಯ ವೇದಿಕೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪುಸ್ತಕ ಮಳಿಗೆಗಳನ್ನು ಕನ್ನಡ ಪುಸ್ತಕ ಪ್ರಾಧಿಕಾರದ ಮಾಜಿ ಅಧ್ಯಕ್ಷ ಡಾ. ಬಂಜಗೆರೆ ಜಯಪ್ರಕಾಶ್ ಉದ್ಘಾಟಿಸಿದರು.

ಕನ್ನಡಪ್ರಭ ಸೋಮವಾರ 6.8.2018



ಮೇಘಮೈತ್ರಿ ಕನ್ನಡ ಮತ್ತು ಸಾಹಿತ್ಯ ವೇದಿಕೆ ಭಾನುವಾರ ಕನ್ನಡ ಸಾಹಿತ್ಯ ಪರಿಷತ್‌ನಲ್ಲಿ ಏರ್ಪಡಿಸಿದ್ದ 'ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ'ದಲ್ಲಿ ಹಲವು ಯುವ ಸಾಹಿತಿಗಳ ಪುಸ್ತಕಗಳನ್ನು ಬಿಡುಗಡೆ ಮಾಡಲಾಯಿತು.

ಈ ಸಂಜೆ

ಭಾನುವಾರ 5-8-2018



ಮೇಘಮೈತ್ರಿ ಕನ್ನಡ ಮತ್ತು ಸಾಹಿತ್ಯ ವೇದಿಕೆ ವತಿಯಿಂದ ನಗರದಲ್ಲಿಂದು ಹಮ್ಮಿಕೊಂಡಿದ್ದ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ. ಕೃಷ್ಣ, ಕಸಾಪ ನಗರ ಘಟಕ ಅಧ್ಯಕ್ಷ ಮಾಯಣ್ಣ, ಕರ್ನಾಟಕ ಸಾಹಿತ್ಯ ಅಕಾಡೆಮಿ ಸದಸ್ಯ ಡಾ. ಬೈರಮಂಗಲ ರಾಮೇಗೌಡ, ವೇದಿಕೆ ಅಧ್ಯಕ್ಷ ಪ್ರಕಾಶ್ ಆರ್. ಗುಳೇದಗುಡ್ಡ, ಪ್ರಾಧ್ಯಾಪಕ ಹಾಗೂ ಸಮ್ಮೇಳನಾಧ್ಯಕ್ಷ ಎಸ್. ರಾಮಲಿಂಗೇಶ್ವರ, ಚಿಂತಕ ಡಾ. ಬಂಜಗೆರೆ ಜಯಪ್ರಕಾಶ್ ಮತ್ತಿತರರು ಪಾಲ್ಗೊಂಡಿದ್ದರು.

ಸಂಜೆ ವಾಣಿ

ಭಾನುವಾರ, ಆಗಸ್ಟ್ 5, 201

# ಕನ್ನಡ ಕಲಿಸಲು ಮುಂದಾಗಲು ಕರೆ

ಬೆಂಗಳೂರು, ಆ.5– ಕನ್ನಡ ಪರ ಸಂಘಟನೆಗಳು ಸಂಘರ್ಷದ ಹಾದಿ ತುಳಿಯದೆ, ಕಾನೂನಾತ್ಮಕ ನೆಲೆಯಲ್ಲಿ ಇತರರಿಗೆ ಕನ್ನಡ ಕಲಿಸಲು ಮುಂದಾಗಬೇಕಿದೆ ಎಂದು ಸಾಹಿತಿ, ಸಮ್ಮೇಳನಾಧ್ಯಕ್ಷ ಎಸ್.ರಾಮಲಿಂಗೇಶ್ವರ ಸಲಹೆ ನೀಡಿದರು.

ನಗರದಲ್ಲಿಂದು ಚಾಮರಾಜಪೇಟೆಯ ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ಮೇಘ ಮೈತ್ರಿ ಪ್ರಥಮ ಕನ್ನಡ ಸಾಹಿತ್ಯ ವೇದಿಕೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿ ಅವರು ಮಾತನಾಡಿದರು.

ಸಂಘಟನೆಗಳು ಪ್ರತಿ ಬೀದಿಗಳಲ್ಲಿವೆ. ಒಂದೊಂದು ಸಂಘಟನೆ ವಿಭಿನ್ನ ರೀತಿಯ ಆಲೋಚನೆ ಇಟ್ಟುಕೊಂಡಿವೆ. ಆದರೆ, ಸಂಘರ್ಷದ ಹಾದಿಯಲ್ಲಿ ನಡೆಯದೆ, ಕನ್ನಡ ಬಲ್ಲದವರಿಗೆ ಕಲಿಸಲು–ತಿಳಿ ಹೇಳಲು ಮುಂದಾಗಬೇಕು. ಆಗ ಭಾಷಾ ಅಭಿವೃದ್ಧಿ ಸುಧಾರಣೆ ಕಾಣಲಿದೆ ಎಂದು ತಿಳಿಸಿದರು.

ಶಿಕ್ಷಣ ಇಂದು ಮಾರಾಟ, ವ್ಯಾಪಾರದ ವಸ್ತುಗಳಾಗುತ್ತಿವೆ. ಸೇವೆ ಎಂಬ ಭಾವನೆ ಮರೆಯಾಗುತ್ತದೆ. ಕೆಲವೊಂದು ಸಂಸ್ಥೆಗಳು ಅಪವಾದ ಎಂದೇ ಹೇಳಬೇಕು ಎಂದ ಅವರು, ರೈತರ ಸಾಲ ಮನ್ನಾ ಮಾಡಲಾಗಿದೆ. ಸರ್ಕಾರ ಬೆಳೆದ ಧಾನ್ಯ ಉಚಿತವಾಗಿ ನೀಡುವ ಬದಲು ಉಚಿತ ಆರೋಗ್ಯ, ಚಿಕಿತ್ಸೆ, ಗುಣಮಟ್ಟ ಶಿಕ್ಷಣ ಹಾಗೂ ಉದ್ಯೋಗ ಕಲಿಸಲು ಮುಂದಾಗಲಿ ಎಂದು ನುಡಿದರು.

ರಾಜ್ಯ ಒಡೆದಾಳುವ ನೀತಿ ತೊಲಗಿಸಬೇಕು. ಬದಲಾಗಿ ಎಲ್ಲಾ ಭಾಗದ ಅಭಿವೃದ್ಧಿಗೆ ಸರ್ಕಾರ ಗಮನ ನೀಡಬೇಕು ಎಂದ ಅವರು, ರಾಜಕಾರಣದಲ್ಲಿ ಮಹಿಳಾ ಮೀಸಲಾತಿಯನ್ನ ಪಂಚಾಯಿತಿ ಚುನಾವಣೆಗೆ ಜಾರಿಗೆ ನೆಪಕ್ಕೆ ಮಾತ್ರ ತಂದು ಆಡಳಿತದಲ್ಲಿ ಮೇಲ್ವರ್ಗದವರೇ ಆಳ್ವಿಕೆ ಮಾಡುತ್ತಿದ್ದಾರೆ. ಕುಟುಂಬ ರಾಜಕಾರಣ ಹೆಚ್ಚಾಗುತ್ತಿದೆ. ಈ ಕುರಿತು ಜನಜಾಗೃತಿ ಮೂಡಿಸಬೇಕು ಎಂದು ತಮ್ಮ ಭಾಷಣದಲ್ಲಿ ಉಲ್ಲೇಖಿಸಿದರು.

ಕನ್ನಡ ಪುಸ್ತಕ ಪ್ರಾಧಿಕಾರದ ಮಾಜಿ ಅಧ್ಯಕ್ಷ ಡಾ.ಬಂಜಗೆರೆ ಜಯಪ್ರಕಾಶ್ ಮಾತನಾಡಿ, ಕನ್ನಡದ ಪ್ರಗತಿಯಲ್ಲಿ ಸಂಘಸಂಸ್ಥೆಗಳ ಪಾತ್ರ ಬಹು ದೊಡ್ಡದು. ಹೀಗಾಗಿ ಪ್ರತಿಭಟಿಸುವ ಬದಲಾಗಿ, ಪ್ರೀತಿಯಿಂದ ಕನ್ನಡ ಕಲಿಕೆ ಮಾಡಬೇಕು ಎಂದು ಅಭಿಪ್ರಾಯಪಟ್ಟರು.

ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ ಮಾತನಾಡಿ, ಅಖಂಡ ಕರ್ನಾಟಕವಾದರೂ ಆಗಿದೆ. ಆದರೆ, ಇತ್ತೀಚಿಗೆ ರಾಜಕೀಯ ಲಾಭಕ್ಕಾಗಿ ಪ್ರತ್ಯೇಕತೆಯ ಕೂಗೂ ಹುಟ್ಟುಹಾಕಲಾಗಿದೆ. ಏಕೀಕರಣದ ಮಹತ್ವ ತಿಳಿಯದವರು ಪ್ರತ್ಯೇಕ ರಾಜ್ಯ ಬೇಕು ಎನ್ನುತ್ತಿದ್ದಾರೆ ಎಂದು ಅಸಮಾಧಾನ ವ್ಯಕ್ತಪಡಿಸಿದರು.

ಸಮ್ಮೇಳನದ ಧ್ವಜಾರೋಹಣವನ್ನು ಬೆಂಗಳೂರು ವಕೀಲರ ಸಾಹಿತ್ಯ ಕೂಟದ ಅಧ್ಯಕ್ಷ ನಂಜಪ್ಪ ನೆರವೇರಿಸಿದರು. ಪುಸ್ತಕ ಮಳಿಗೆಯನ್ನು ಎಸ್.ಆರ್.ವೆಂಕಟೇಶ್ ಕಸಾಪ ಜಿಲ್ಲಾಧ್ಯಕ್ಷ ಮಾಯಣ್ಣ, ಸಾಹಿತಿ ಡಾ.ಬೈರಮಂಗಲ ರಾಮೇಗೌಡ, ಗಣೇಶ್ ಕೊಡೂರು, ಡಾ.ಶೇಖರ ಮಾಲಿ ಪಾಟೀಲ ಸೇರಿದಂತೆ ಪ್ರಮುಖರು ಉಪಸ್ಥಿತರಿದ್ದರು.



ಕನ್ನಡ ಸಾಹಿತ್ಯ ಪರಿಷತ್‌ನಲ್ಲಿ ಇಂದು ನಡೆದ ಮೇಘ ಮೈತ್ರಿ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸಿದ್ದ ಸಂಸ್ಕೃತಿ ಚಿಂತಕ ಬಂಜಗೆರೆ ಜಯಪ್ರಕಾಶ್, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ. ಕೃಷ್ಣ, ಕರ್ನಾಟಕ ಸಾಹಿತ್ಯ ಅಕಾಡೆಮಿ ಸದಸ್ಯ ಭೈರಮಂಗಲ ರಾಮೇಗೌಡ ಮತ್ತಿತರರು ಪುಸ್ತಕವನ್ನು ಆಸಕ್ತಿಯಿಂದ ವೀಕ್ಷಿಸುತ್ತಿರುವುದು.

6